

# ಭಾಮಿನಿ.

[ ಸಾಮಾಜಿಕ ಕಾದಂಬರಿ ]



ಲೇಖಕ

ಶಂಕರ ಅಣ್ಣಾಜಿ ಕುಲಕರ್ಣಿ.



ಬೆಲೆ ೮ ಆಣೆ.

# ಭಾಮಿನಿ

[ಸಾಮಾಜಿಕ ಕಾದಂಬರಿ]

ಇದನ್ನು

ಭಯಂಕರ ಕೊಲೆ,

ಮೋಜಿನ ಮರಣ, ದೇವ-

ದಾನವರು, ಜಯ-ಪರಾಜಯ, ತುಳಸೀದಾಸ,

ಗುರುಗೋವಿಂದಸಿಂಹ

ಮೊದಲಾದ ಪುಸ್ತಕ ಕರ್ತೃಗಳಾದ

ಶಂಕರ ಅಣ್ಣಾಜಿ ಕುಲಕರ್ಣಿ, ನೂಲವಿ

ಇವರು ಬರೆದರು.

ಪ್ರಕಾಶಕ:—

ಯ. ಗು. ಕುಲಕರ್ಣಿ.

ಸಂಪಾದಕ, ಸ. ಚ, ಆನಂದವನ.



೧೯೩೧

ಬೆಲೆ ೮ ಆಣೆ.

# ಇದೇ ಲೇಖಕರ ಬೇರೆ ಪುಸ್ತಕಗಳು.

## (ಐತಿಹಾಸಿಕ ಕಾದಂಬರಿಗಳು)



| | | |
|---|---|---|
| ೧ | ಜಕಣಾಚಾರ್ಯ | ೦-೧೪-೦ |
| ೨ | ಕರ್ನಾಟಕ ಸಿಂಹಾಸನ ಸ್ಥಾಪನೆ | ೧ ೦-೦ |
| ೩ | ವಿಚಿತ್ರ ವಿವಾಹ | ೧-೦-೦ |
| ೪ | ವಿಕಾರ ವಿನಾಶ | ೦-೧೦-೦ |
| ೫ | ಸಾಧ್ವೀ ಹೃದಯ | ೧-೪-೦ |
| ೬ | ಪನ್ನಾವತಿ | ೧-೬-೦ |
| ೭ | ತುಳಸೀದಾಸ | ೧-೮-೦ |

## (ಚರಿತ್ರೆಗಳು.)

| | | |
|---|---|---|
| ೮ | ಮಹಾರಾಣಾ ಪ್ರತಾಪಸಿಂಹ | ೧-೪-೦ |
| ೯ | ಗುರುಗೋವಿಂದಸಿಂಹ | ೦-೧೨-೦ |
| ೧೦ | ಹರ್ಷ ಸಾಮ್ರಾಜ್ಯ | ೦-೮-೦ |
| ೧೧ | ಬೇಗಮ ಸಮರು | ೦-೬-೦ |
| ೧೨ | ಸ್ವಾಮೀ ಶ್ರದ್ಧಾನಂದ | ೦-೧೨-೦ |

## (ಇತರ ಪುಸ್ತಕಗಳು.)

| | | |
|---|---|---|
| ೧೩ | ಭಯಂಕರ ಕೊಲೆ (ಪತ್ತೆದಾರಿ ಕಾದಂಬರಿ ೨ನೇ ಆವೃತ್ತಿ) | ೦-೧೨-೦ |
| ೧೪ | ಜಯ ಪರಾಜಯ (ಸಾಮಾಜಿಕ ಕಾದಂಬರಿ) | ೦-೧೨-೦ |
| ೧೫ | ಗಂಗಾಲಹರಿ (ಅನ್ವಯ ಅರ್ಥ ಸಹಿತ) | ೦-೫-೦ |
| ೧೬ | ಮೋಜಿನ ಮರಣ (ಪ್ರಹಸನ) | ೦-೧೨-೦ |
| ೧೭ | ರಾಷ್ಟ್ರಸಭೆಯ ಇತಿಹಾಸ | ೨-೦-೦ |
| ೧೮ | ದೇವ-ದಾನವರು (ಪೌರಾಣಿಕ ಗದ್ಯನಾಟಕ) | ೦-೧೨-೦ |
| ೧೯ | ಅರುಂಧತಿ (ಪೌರಾಣಿಕ ಕಥೆ ಅಚ್ಚಾಗುತ್ತಲಿದೆ) | |
| ೨೦ | ಸತೀಶಿರೋಮಣಿ (ಪೌರಾಣಿಕ ಗದ್ಯನಾಟಕ ಅಚ್ಚಾಗುತ್ತಲಿದೆ) | |

ಸಿಗುವ ವಿಳಾಸ:—ಬಿ. ಪ. ಕಾಳೆ, ಶ್ರೀ ಶೇಷಾಚಲ ಗ್ರಂಥಮಾಲೆ,
ಪೋ. ಆನಂದವನ, ಜಿ. ಧಾರವಾಡ.

# ಭಾಮಿನಿ.

೧




ಳಿಗಾಲ. ಶುಕ್ಲಪಕ್ಷದ ಸಾಯಂಕಾಲದ ಸಮಯ. ಸುಮಾರು ಐದೂವರೆ ಗಂಟೆಯಾಗಿರಬಹುದು. ದಿನಪತಿಯು ಅಸ್ತಾಚಲವನ್ನೇರಿದ್ದನು. ಹೂಬಿಸಿಲು ಅಲ್ಲಲ್ಲಿ ಬಿದ್ದಿತ್ತು. ನಗರದ ರಾಜಮಾರ್ಗಗಳು ಸಂಚರಿಸುವ ಜನರಿಂದ ಮುಖರಿತವಾಗಿದ್ದುವು. ಈ ಸಮಯದಲ್ಲಿ ಶ್ರೀಯುತ ರವದಿ ರಂಗರಾಯರ ಮನೆಯಲ್ಲಿ ಚಹಾಪಾರ್ಟಿಯು ನಡೆದಿತ್ತು. ಚಹಾಪಾನಕ್ಕಾಗಿ ಕೂಡಿದವರೆಲ್ಲರು ರಂಗರಾಯನ ಸ್ನೇಹಿತರು. ಈ ಗೆಳೆಯರ ಗುಂಪು ಬಿಸ್ಕೀಟ-ಚಹಗಳ ಸೇವನೆಯೊಡನೆ ಹರಟೆಯನ್ನು ನಡೆಸಿತ್ತು.

ರಂಗರಾಯನು ಕರ್ನಾಟಕ ಕಾಲೇಜದ ಪ್ರೋಫೆಸರನು—ತತ್ವಜ್ಞಾನದ ಅಧ್ಯಾಪಕನು. ವಿಲಾಯತಿಗೆ ಹೋಗಿ ಅಭ್ಯಾಸಮಾಡಿ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಪದವಿಯನ್ನು ಪಡೆದು ಬಂದವನು. ಹೆಸರಾದ ಶಿಕ್ಷಕನು. ವಯಸ್ಸು ಸುಮಾರು ಮೂವತ್ತೆರಡು. ಪಗಾರ ತಿಂಗಳೊಂದಕ್ಕೆ ಎಂಟುನೂರು ರೂಪಾಯಿ. ರಂಗರಾಯನು ವಂಶಪರಂಪರಾಗತ ಧಾರವಾಡದ ನಿವಾಸಿಯು. ಮಾಳಮಡ್ಡಿಯಲ್ಲಿ ಇವನ ಸ್ವಾಮಿತ್ವದ ಬಂಗಲೆಯಿತ್ತು. ರಂಗರಾಯನು ಈ ಬಂಗಲೆಯಲ್ಲಿಯೇ ವಾಸವಾಗಿದ್ದನು. ಇವನ ಎರಡನೆಯ ಹೆಂಡತಿಯಾದ ರಮೆಯು ಐದು ತಿಂಗಳ ಹಿಂದೆ ಒಂಬತ್ತು ವರುಷ ವಯಸ್ಸಿನ ಒಬ್ಬ ಹುಡುಗನನ್ನಿರಿಸಿ ನಿಧನಹೊಂದಿದ್ದಾಳೆ. ರಂಗರಾಯನ ಬಂಗಲೆಯಲ್ಲಿ ಬೇರೆ ಬೇರೆ ಕೆಲಸಗಳಿಗಾಗಿ ಹಲವರು ದಾಸ-ದಾಸಿಯರಿದ್ದಾರೆ ಒಂದು ದೃಷ್ಟಿಯಿಂದ ಈ ದಾಸ-ದಾಸಿಯರಿಂದಲೇ ರಂಗರಾಯನ ಸಂಸಾರವು ಸಾಗಿದೆಯೆಂದು ಹೇಳಬಹುದು.

ರಂಗರಾಯನು ಎರಡನೆಯ ಹೆಂಡತಿಯ ಮರಣದ ನಿರುಪಾಯ ಕೆಲವು ದಿನಗಳ ವರೆಗೆ ಮತ್ತೆ ಮದುವೆ ಮಾಡಿಕೊಳ್ಳಲಿಕ್ಕೆ ಮನಸ್ಸು ಮಾಡಲಿಲ್ಲ.

ಇದು ಸ್ವಾಭಾವಿಕ ಸಂಗತಿಯಾಗಿದೆ; ಆದರೆ ರಂಗರಾಯನು ಕೆಲವು ದಿನಗಳಿಂದ ಮೂರನೆಯ ವಿವಾಹಕ್ಕೆ ಒಪ್ಪಿದ್ದಾನೆ. ಇದರಲ್ಲಿ ವೈಶಿಷ್ಟ್ಯವೇನೂ ಇಲ್ಲ. ಮೇಲೆ ಹೇಳಿದ ಮಧ್ವರಾಯರ ಮಗಳು ನೋಡುವದಕ್ಕೆ ಸುಂದರಿಯು, ಹಾಗು ಈ ವರುಷ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯನ್ನು ಪಾಸಾಗಿದ್ದಾಳೆ. ಮಧ್ವರಾಯನು ತನ್ನ ಈ ಮಗಳನ್ನು ರಂಗರಾಯನಿಗೆ ಧಾರೆಯೆರೆಯಬೇಕೆಂದು ಹವಣಿಸುತ್ತಿದ್ದಾನೆ ರಂಗರಾಯನ ಈ ಮೂರನೆಯ ಮದುವೆಯು ಮಾತು ಕೌತುಕದ್ದಲ್ಲ, ವಿಶೇಷತೆಯನ್ನೊಡಗೊಂಡದ್ದೂ ಅಲ್ಲ, ಆದರೆ ಇಂದಿನ ಚಹಾಪಾರ್ಟಿಯ ಬೈಠಕಿಯಲ್ಲಿ ಇದೇ ವಿಷಯದ ಚರ್ಚೆಗೆ ಆರಂಭವಾಗಿತ್ತು.

ಈ ಚಹಾಪಾನದ ಸಭೆಯ ಮೆಂಬರರಲ್ಲಿ ಕನ್ನಡ ಶಾಲೆಯ ಶಿಕ್ಷಕನೊಬ್ಬನಿದ್ದನು. ಇವನು ವಯಸ್ಸಿನಿಂದ ಎಲ್ಲರಿಗಿಂತ ಹಿರಿಯನು. ಬಡಮಾಸ್ತರನಾಗಿದ್ದರೂ ಚಹಾಪಾನದ ಮೇಲಾಟದಲ್ಲಿ ಪ್ರೊಫೆಸರರನ್ನೂ ಹಿಂದೆ ದೂಡತಕ್ಕವನು. ರಂಗರಾಯನ ಅಂತರಂಗದ ಸ್ನೇಹಿತನಾಗಿರದಿದ್ದರೂ ಪುರೋಹಿತನು. ಆದುದರಿಂದ ಇವನು ಆಮಂತ್ರಣ ಹೊಂದದಿದ್ದರೂ ಚಹಾಪಾನದ ಸಮಯದಲ್ಲಿ ತಪ್ಪದೆ ಹಾಜರಿರುತ್ತಿದ್ದನು ಇದರಿಂದ ಈ ಶಿಕ್ಷಕನು ರಂಗರಾಯನ ಗೆಳೆಯರಿಗೆ ಗುರುತಿನವನಾಗಿದ್ದನು. ರಂಗರಾಯನ ಎಲ್ಲ ಸ್ನೇಹಿತರಿಗೆ ಈ ಮುದುಕ ಮಾಸ್ತರನು ಚೇಷ್ಟೆಯ ವಿಷಯವಾಗಿದ್ದನು. ಎಲ್ಲರು ಇವನನ್ನು ದಿಗ್ಗಜನೆಂದು ಸಂಬೋಧಿಸುತ್ತಿದ್ದರ ; ಯಾಕೆಂದು ಈ ದಿಗ್ಗಜಪಂಡಿತನು ವಿಚಾರ ಮಾಡಿ ಮಾತಾಡುತ್ತಿದ್ದಿಲ್ಲ ತಾನಾಡಿದ ಮಾತಿನ ಜವಾಬದಾರಿಯನ್ನು ಹೊರುತ್ತಿರಲಿಲ್ಲ.

ದಿಗ್ಗಜನು ಇಂಗ್ಲಿಷಭಾಷೆಯನ್ನ ಕಲಿತವನಲ್ಲ. ಹೆಣ್ಣುಮಕ್ಕಳು ಇಂಗ್ಲಿಷಭಾಷೆಯಲ್ಲಿ ಪಾಸಾಗಿರುವರೆಂಬ ಸುದ್ದಿಯನ್ನು ಕೇಳುತ್ತಲೆ ಇವನಿಗೆ ಕಡು ಕೋಪವುಂಟಾಗುತಿತ್ತು. ಇಂದಿನ ಚಹ ಕುಡಿಯುವ ಮೀಟಿಂಗಿನಲ್ಲಿ ಮಧ್ವರಾಯನ ಮಗಳ ಸುದ್ದಿಯು ಹೊರಡುತ್ತಲೆ, ದಿಗ್ಗಜನು ಕುಪಿತನಾಗಿ ರಂಗರಾಯನನ್ನು ಕುರಿತು ಮಾತಾಡಹತ್ತಿದನು. "ಒಬ್ಬ ಹೆಂಡತಿಯನ್ನು ಮನೆಬಿಡಿಸಿ ಹೊರದೂಡಿರುವೆ! ಮತ್ತೊಬ್ಬ ಮಡದಿಯನ್ನು ಮರಣಕ್ಕೆ ಗುರಿಮಾಡಿದೆ! ಇಷ್ಟರಿಂದ ನಿನಗೆ ಸಂತುಷ್ಟತೆಯಾಗಲಿಲ್ಲವೆ? ಮತ್ತೆ ಮದುವೆಯನ್ನು ಮಾಡಿಕೊಳ್ಳುವೆಯಾ? ರಾಮಪುರದ ವೇಣುಗೋಪಾಲಾಚಾರ್ಯರ ಮಗಳ ದೋಷವೇನು? ಇನ್ನೂ ಸಾಂಸಾರಿಕನಾಗಿರುವ ಇಚ್ಛೆಯು ನಿನಗಿದ್ದರೆ, ಅವಳನ್ನು ಕರೆಕಳುಹು, ಅವಳೊಡನೆ ಬಾಳುವೆ ಮಾಡು!''

ಮಿತ್ರಮಂಡಳಿಯಲ್ಲಿ ಯಾವನೂ ರಂಗರಾಯನ ಪ್ರಥಮ ವಿವಾಹದ ಸಂಗತಿಯನ್ನರಿತಿರಲಿಲ್ಲ. ಕಾರಣ ಗೆಳೆಯರೆಲ್ಲರು ದಿಗ್ಗಜನ ಮಾತ ಕೇಳಿ ಆಶ್ಚರ್ಯಾನ್ವಿತರಾದರು. ದಿಗ್ಗಜನು ಮತ್ತೆ ಹೇಳಹತ್ತಿದನು.—"ವೇಣುಗೋಪಾಲಾಚಾರ್ಯರ ಮಗಳ ಹಣೆಯ ಬರಹವು ಚನ್ನಾಗಿದೆ. ಅಂತೆಯೇ ಭಗವಂತನು ಅಕಾಲದಲ್ಲಿ ರಮಾಬಾಯಿಯು ಸಾಯುವಂತೆ ಮಾಡಿದ್ದಾನೆ. ಇನ್ನು ನೀನು ಬೇರೆ ವಿವಾಹದ ವಿಚಾರ ಮಾಡಬೇಡ. ಅವಳನ್ನೇ ಕರೆದುಕೊಂಡು ಬಾ. ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಉತ್ತೀರ್ಣಳಾದ ಹೆಂಡತಿಯು ದೊರೆಯುವಳೆಂದು ಮಬ್ಬಿಗೆ ಬೀಳಬೇಡ! ಪರೀಕ್ಷೆ ಪಾಸಾದರೇನಾಯಿತು? ಇಂಥ ಹೆಂಡತಿಯಿಂದ ನಿನ್ನ ಬಾಳುವೆಗೆ ಉಪಯೋಗವೇನು? ಈಗಿನ ಕಾಲಕ್ಕೆ ವಿದ್ಯೆಯು ಅಗ್ಗವಾಗಿ ಹೋಗಿದೆ! ಎಲ್ಲರೂ ಕಲಿಯುವವರೇ! ಎಲ್ಲರೂ ಪಾಸಾಗಿ ಪದವಿಗಳನ್ನು ಪಡೆಯುವವರೆ!" ಮುಂದೆ ಮಾತು ಹೊರಡಲಿಲ್ಲ. ಕ್ರೋಧಾತಿಶಯದಿಂದ ದಿಗ್ಗಜನ ಕಣ್ಣುಗಳಿಗೆ ಕೆಂಪಡರಿತು ರಂಗರಾಯನಿಗೂ ಬಹಳ ಸಿಟ್ಟು ಬಂದಿತು. ಆದರೂ ಇವನು ತನ್ನ ಕೋಪವನ್ನು ತೋರಗೊಡದೆ, ಪ್ರಸ್ತುತ ಪ್ರಸಂಗವನ್ನು ನಗೆಚಾಟಿಕೆಯಲ್ಲಿ ದೂಡುವದಕ್ಕಾಗಿ, "ಓಹೋ ದಿಗ್ಗಜ, ಅರಣ್ಯ ಪಂಡಿತರು ಕಾವ! ಹುಚ್ಚನಂತೆ ಏನಾದರೊಂದು ಮಾತಾಡಿ ಬಿಟ್ಟರಾಯಿತೇನು?" ಎಂದು ರಂಗರಾಯನು ಅಂದನು.

ದಿಗ್ಗಜನು ಅನ್ಯರು ಹುಚ್ಚನೆಂದು ಅಂದುದನ್ನು ಕೇಳಿದರೆ ಸಹಿಸುತ್ತಿರಲಿಲ್ಲ ಇವನ ಸಿಟ್ಟು ಮತ್ತಿಷ್ಟು ಹೆಚ್ಚಿತು ಈ ಕ್ರೋಧದ ಭರದಲ್ಲಿ ಮೈಮರೆದ ಇವನು "ಎಲ್ಲರೂ ಹುಚ್ಚರೆ! ಜನರು ನನ್ನನ್ನು ಹುಚ್ಚನೆಂದು ಕರೆಯುತ್ತಾರೆ-- ಅಂದಬಳಿಕ ನಾನು ಹುಚ್ಚನೇ ಸರಿ!" ಎಂದು ನುಡಿದನು

ದಿಗ್ಗಜನ ಈ ಅಸಂಬದ್ಧ ವಚನಗಳನ್ನು ಕೇಳಿ ಎಲ್ಲರೂ ದೊಡ್ಡದನಿಯಿಂದ ನಗಹತ್ತಿದರು; ಆದರೆ ಸಹಜವಾಗಿ ಒಮ್ಮೆ ಎದ್ದ ಅಪ್ರಿಯ ಸಂಗತಿಯು ಅಡಗಿ ಹೋಗಲಿಲ್ಲ. ನಗುವು ನಿಂತಬಳಿಕ ರಂಗರಾಯನು ನಾಚುಗೆಹೊಂದಿ ಗೆಳೆಯರ ಸಮಾಧಾನಕ್ಕಾಗಿ ಹೇಳಹತ್ತಿದನು: "ನನ್ನ ಜೀವಮಾನದಲ್ಲಿ ಅದೊಂದು ಅತಿಶಯ ವಿಷಾದದ ವಿಷಯವು. ನಾನು ವಿಲಾಯತಿಗೆ ಹೊರಡುವ ಮೊದಲೇ ನನ್ನ ಮೊದಲಿನ ಲಗ್ನವಾಗಿತ್ತು, ಆದರೆ ಮುಂದೆ ಕೆಲ ದಿವಸಗಳಲ್ಲಿ ಯಾವದೊ ಒಂದು ಕಾರಣಕ್ಕಾಗಿ ನನ್ನ ಶ್ವಶುರನಿಗೂ ತಂದೆಗೂ ಭಯಾನಕ ಕಲಹ ವುಂಟಾಯಿತು ಮೇಲಾಗಿ ಅಪ್ಪನು ಅವಳ ಕಾಲ್ಗುಣವು ಕೆಟ್ಟದೆಂದು ಗೊತ್ತು ಮಾಡಿಕೊಂಡಿದ್ದನು. ಈ ಕಾರಣಗಳಿಂದ ಅವಳು ನಮ್ಮ ಮನೆಯಲ್ಲಿ ಬಹಳ

ದಿವಸ ನಿಲ್ಲಲಿಲ್ಲ. ಅಪ್ಪನು ಅಲ್ಪದಿನಗಳಲ್ಲಿಯೇ ಅವಳನ್ನು ತೌರೂರಿಗೆ ಕಳುಹಿಕೊಟ್ಟನು; ತಿರುಗಿ ಕರೆತರಲಿಲ್ಲ. ನಾನು ಇಂಗ್ಲಂಡದಿಂದ ಬಂದ ಬಳಿಕ ಅವಳನ್ನು ನೋಡಿಲ್ಲ.'' ರಂಗರಾಯನು ಕೃತ್ರಿಮಹಾಸ್ಯವನ್ನು ತಂದುಕೊಂಡು ನಗುವ ಪ್ರಯತ್ನಮಾಡಿ ಹೇಳತೊಡಗಿದನು: "ದಿಗ್ಗಜಪಂಡಿತರೇ, ತಾವು ಒಳ್ಳೆ ಬುದ್ಧಿವಂತರು! ಮಾತಾಡುವದು ಬಹು ಸುಲಭ, ಆದರೆ ಕರ್ಮ-ಧರ್ಮಸಂಯೋಗದಿಂದ ಆ ಮಾತಿನಂತೆ ಕೃತಿಯು ನಡೆಯಿತೆಂದರೆ, ಆಗ ಅದನ್ನು ನಿಸ್ತರಿಸಿಕೊಳ್ಳುವದು ಬಹಳ ಜಡ ಹರಿಯುವದೆಂಬದನ್ನು ಮರೆಯದಿರಿ! ಮುಂದಿನ ಮಾತು ಏನೇ ಇರಲಿ, ಈಗ ನಾನೊಂದು ಮಾತು ನಿಮಗೆ ಕೇಳುತ್ತೇನೆ. ನನ್ನ ಶ್ವಶುರನು ಈ ಅವಧಿಯಲ್ಲಿ ಅವಳನ್ನು ನನ್ನ ಮನೆಗೆ ಏಕೆ ಕಳುಹಿಕೊಡಬಾರದು. ಈ ವರೆಗೆ ಉಪೇಕ್ಷೆಯಿಂದ ತ್ಯಜಿಸಿದ ಅವಳನ್ನು ಈಗ ನಾನು ಆಗ್ರಹದಿಂದ ಕರೆಯಹೋಗುವದು ಉಚಿತವಾದೀತೇ? ಮತ್ತೊಂದು ಮಾತೆಂದರೆ, ಈಗ ನೀವು ದಿನಾಲು ನನ್ನ ಈ ಮನೆಗೆ ಚಹಕುಡಿಯುವದಕ್ಕೆ ಬರುತ್ತೀರಷ್ಟೇ? ಆದರೆ ಅವಳು ಬಂದಳೆಂದರೆ, ನಿಮ್ಮ ಮಾತು ಹಾಗಿರಲಿ, ನಾನು ಸಹ ಚಹಾಕ್ಕೆ ಎರವಾಗುವ ಪ್ರಸಂಗ ಬರದಿರದು! ನಾವು ಹೀಗೆ ನಾಲ್ವರು ಕೂಡಿ ಚಹಾಪಾನ ಮಾಡುತ್ತಿರುವುದನ್ನು ನೋಡಿ ಅವಳೆಂದಿಗೂ ಸಹಿಸಳು! ಗೋಮಯವನ್ನೂ, ಕಸಬರಿಗೆಯನ್ನೂ ತಕ್ಕೊಂಡು ಬಂದು ಈ ಸ್ಥಳವನ್ನು ಸ್ವಚ್ಛಮಾಡಲಿಕ್ಕೆ ತೊಡಗುವ ಮೊದಲು ಅವಳು ನಮ್ಮ ಶುದ್ಧತೆಗೆ ಪ್ರಯತ್ನಿಸದೆ ಬಿಡಳು! ಅವಳು ಈ ಮನೆಗೆ ಬಂದಳೆಂದರೆ, ಮುಂದೆ ಏನಾದೀತೆಂಬದರ ಕೊಂಚ ದಿಗ್ದರ್ಶನವನ್ನು ನಾನು ಮಾಡಿದ್ದೇನೆ. ನೀವು ಇದೆಲ್ಲವನ್ನೂ ವಿಚಾರಿಸಿ ಸರಿಯಾಗಿ ಮಾತನಾಡಿರಿ!''

"ಹಾಗೆಂದಿಗೂ ಆಗದು! ನೀನು ಅವಳನ್ನು ಕರೆತರುವುದೇ ವಿಹಿತವಾದದ್ದು!'' ದಿಗ್ಗಜನು ನಿರ್ಧಾರದಿಂದ ನುಡಿದನು.

ಉಳಿದವರಲ್ಲಾರೂ ಈ ವಾದವಿವಾದದಲ್ಲಿ ಸೇರಲಿಲ್ಲ. ಇಷ್ಟೇ ಅಲ್ಲ, ಒಬ್ಬ ಗೆಳೆಯನು ಈ ಅಪ್ರಿಯ ವಾದವನ್ನು ಮರೆಮಾಚುವ ಉದ್ದೇಶದಿಂದ ಬೇರೆ ಮಾತೆತ್ತಿದನು. ಮುಂದೆ ತುಸ ಹೊತ್ತಿನ ವರೆಗೆ ಬೇರೆ ವಿಷಯದ ಹರಟೆಯು ನಡೆಯಿತು. ಬಳಿಕ ಹೊತ್ತು ಬಹಳವಾಯಿತೆಂದು ಹೇಳಿ, ಮಿತ್ರಮಂಡಳಿಯು ತಮ್ಮ ಮನೆಗಳಿಗೆ ಹೊರಟಿತು. ದಿನಾಲು ಹೀಗೆಯೇ ನಡೆಯುತ್ತಿತ್ತು. ನಿಯಮಿತ ವೇಳೆಯಲ್ಲಿ ಚಹಾಪಾನಕ್ಕೋಸುಗ ಕಲೆಯುತ್ತಿದ್ದರು. ಸರಿಯಾದ ವೇಳೆಗೆ

ಚಹಾಪಾನವನ್ನೂ, ಹರಟೆಯನ್ನೂ ಮುಗಿಸಿ ತಮ್ಮ ಮನೆಗಳಿಗೆ ಹೊರಡುತ್ತಿದ್ದರು. ಇಂದಿನ ದಿನವೂ ಈ ಕ್ರಮವು ತಪ್ಪಲಿಲ್ಲ; ಆದರೆ ಈ ವಿನೋದದ ಸಮಯದಲ್ಲಿ ಆಗಂತುಕವಾಗಿ ಎದ್ದ ಅಪ್ರಿಯ ಮಾತುಗಳು ಎಲ್ಲರಿಗೂ ವಿಷಾದವನ್ನುಂಟು ಮಾಡಿದ್ದವು; ಉಂಟಾದ ಈ ಅಸಮಾಧಾನವು ಎಷ್ಟೋ ವೇಳೆಯವರೆಗೆ ಕಡಿಮೆಯಾಗದೆ ಹಾಗೆಯೇ ಉಳಿಯಿತು.

---

## ೨

ಮಿತ್ರಮಂಡಳಿಯಲ್ಲಿಯ ಒಬ್ಬನೂ ಸಹ ತನ್ನ ಮೂರನೆಯ ಮದುವೆಗೆ ಸಮ್ಮತಿಯನ್ನು ಕೊಡಲಿಲ್ಲವಿಷ್ಟೇ ಅಲ್ಲ, ಎಲ್ಲರೂ ಸುಮ್ಮನಿದ್ದು ತಿರಸ್ಕಾರವನ್ನೇ ವ್ಯಕ್ತಪಡಿಸಿದರೆಂಬುದು ರಂಗರಾಯನಿಗೆ ಹೊಳೆಯಿತು. ಇದರಿಂದ ರಂಗರಾಯನಿಗೆ ಕೋಪವುಂಟಾಯಿತು. ನಾಚಿಕೆಯೂ ಹುಟ್ಟಿತು. ತಾನಿನ್ನು ತನ್ನ ಆ ಸ್ನೇಹಿತರಿಗೆ ಮೋರೆಯನ್ನು ತೋರುವದು ಲಜ್ಜಾಹೀನತೆಯ ಲಕ್ಷಣವೆಂದು ಇವನಿಗೆ ಅನಿಸಿತು. ಇವನ ಮೊದಲನೆಯ ಮದುವೆಯಾದಾಗ ಇವನು ಹದಿನೆಂಟುವರ್ಷದವನಿದ್ದನು ಆಗ ಇವನ ಹೆಂಡತಿಯಾದ ಭಾಮಿನಿಯ ವಯಸ್ಸು ಕೇವಲ ಹನ್ನೊಂದುವರುಷ. ಈ ಕನ್ಯೆಯು ಬಹು ಚಲುವೆಯಾಗಿದ್ದುದರಿಂದಲೇ ರಂಗರಾಯನ ತಂದೆಯು ಅಲ್ಪವರದಕ್ಷಿಣೆಯಿಂದ ಮಗನ ಮದುವೆಗೆ ಸಮ್ಮತಿಸಿದ್ದನು; ಆದರೆ ಮುಂದೆ ರಂಗರಾಯನು ವಿಲಾಯತಿಗೆ ಹೋಗುತ್ತಲೆ ಕೊಡಕೊಳ್ಳುವ ವ್ಯವಹಾರದ ವಿಷಯವಾಗಿ ಬೀಗರಲ್ಲಿ ಭಯಂಕರ ಕಲಹವೆದ್ದಿತು. ರಂಗರಾಯನ ತಂದೆಯು ಸೊಸೆಯನ್ನು ಜುಲುಮೆಯಿಂದ ತೌರುಮನೆಗೆ ಕಳುಹಿಕೊಟ್ಟನು. ಮುಂದೆ ರಂಗರಾಯನು ವಿಲಾಯತಿಯಿಂದ ಬಂದಬಳಿಕ ಸೊಸೆಯನ್ನು ಕರೆಸಿಕೊಳ್ಳಲಿಲ್ಲವಿಷ್ಟೇ ಅಲ್ಲ, ಈ ತರದ ಇಚ್ಛೆಯೂ ಅವನಿಗುಂಟಾಗಲಿಲ್ಲ. ಅತ್ತ ಭಾಮಿನಿಯ ತಂದೆಯೂ ಬಹು ಅಭಿಮಾನಿಯಾಗಿದ್ದನು. ಅವನು ಬೀಗನ ಬಳಿಯಲ್ಲಿ ಕೊಂಚವೂ ತಲೆಬೊಗ್ಗಿಸಲು ಮನಸ್ಸು ಮಾಡಲಿಲ್ಲ. ಬೀಗನಿಗೆ ಹೇಳಿಕೊಂಡು ಮಗಳನ್ನು ಮಾವನ ಮನೆಯಲ್ಲಿ ಬಿಟ್ಟು ಬರಲಿಕ್ಕೆ ಇಚ್ಛಿಸಲಿಲ್ಲ.

ರಂಗರಾಯನು ವಿಲಾಯತಿಯಲ್ಲಿರುವಾಗಲೆ ತಂದೆ-ಮಾವಂದಿರ ನಡುವೆ ನಡೆದಿದ್ದ ಕಲಹದ ಸುದ್ದಿಯನ್ನು ಕೇಳಿದ್ದನು. ಈ ಕಲಹವು ಮುಂದೆ ತಾನೇ

ತಾನಾಗಿ ನೊಂದುವದೆಂದು ಭಾವಿಸಿದ ಇವನು ಈ ವಿಷಯದಲ್ಲಿ ಮನಸ್ಸು ಹಾಕಿರಲಿಲ್ಲ. ರಂಗರಾಯನು ಮುಂದೆ ನಾಲ್ಕು ವರುಷಗಳ ತರುವಾಯ ಪದವಿಯನ್ನು ಪಡೆದು ಸ್ವಗೃಹಕ್ಕೆ ಮರಳಿ ಬಂದನು. ಈ ಅವಧಿಯಲ್ಲಿ ಇವನ ಸ್ವಭಾವವು ಪರಿವರ್ತನೆಯನ್ನು ಹೊಂದಿ ಹೋಗಿತ್ತು. ಬೇಡಿಕೆಯೂ ಬಿನ್ನವಾಗಿತ್ತು. ಕಾರಣ ನವನಾಗರಿಕತೆಯ ಸುಂದರ ತರುಣಿಯು ಹೇರಳ ಹಣದೊಡನೆ ಕೈಹಿಡಿಯ ಬಂದುದನ್ನು ಕಂಡ ಇವನು ಮೊದಲನೆಯ ಮದುವೆಯ ಪಾಶವನ್ನು ಮರೆದುಬಿಟ್ಟನು. ಎರಡನೆಯ ವಿವಾಹಕ್ಕೆ ಸಂತೋಷದಿಂದ ಸಮ್ಮತಿಸಿದನು. ತರುವಾಯ ಬಹು ದಿನಗಳು ಗತಿಸಿ ಹೋಗಿವೆ. ಈ ಅವಧಿಯಲ್ಲಿ ರಂಗರಾಯನ ತಂದೆಯು ತೀರಿಕೊಂಡಿದ್ದಾನೆ. ಭಾಮಿನಿಯ ತಂಗಿಯೂ ನಿಧನಹೊಂದಿದ್ದಾನೆ.

ರಂಗರಾಯನು ಭಾಮಿನಿಯನ್ನು ಸಂಪೂರ್ಣ ರೀತಿಯಿಂದ ಮರೆತು ಬಿಟ್ಟಿದ್ದನೆಂದಲ್ಲ. ಜನಮುಖದಿಂದ ಅವಳ ವಿಷಯದ ಕೆಲಸಂಗತಿಗಳನ್ನು ತಿಳಿದಿದ್ದಾನೆ; ಅವಳು ಅಣ್ಣಂದಿರ ಸಂಸಾರದಲ್ಲಿ ಸೇರ್ಪಡೆಯಾಗಿದ್ದಾಳೆ. [illegible] ವ್ಯಲಿಗೆಗಳ ಚರ್ಚೆಯಲ್ಲೂ ದೇವಪೂಜೆ-ನಾಮಸ್ಮರಣೆಗಳಲ್ಲೂ ಕಾಲಕಳೆಯುತ್ತಿದ್ದಾಳೆ. ಅವಳ ಅತಿ ಧಾರ್ಮಿಕಾಚರಣೆಯಿಂದ ಅಣ್ಣತಮ್ಮಂದಿರೂ ಬೇಸತ್ತು ಹೋಗಿದ್ದಾರೆ. ಭಾಮಿನಿಯ ಈ ಆಚರಣೆಗಳಲ್ಲಿಯ ಯಾವದೂ ರಂಗರಾಯನಿಗೆ ಸಂತೋಷಪ್ರದವಾಗಲಿಲ್ಲ. ರಂಗರಾಯನು ಭಾಮಿನಿಯ ನಡೆವಳಿಕೆಯ ಬಗ್ಗೆ ಬಹು ಜನರನ್ನು ವಿಚಾರಿಸಿದ್ದನು. ಇವರಲ್ಲಿಯ ಒಬ್ಬನೂ ಸಹ ಭಾಮಿನಿಯ ಚಾರಿತ್ರ್ಯದೋಷದ ಮಾತೆತ್ತಿರಲಿಲ್ಲ. ಎಲ್ಲರೂ ಭಾಮಿನಿಯು ಸಾತ್ವಿಕ ಸ್ತ್ರೀಯೆಂದು ಸ್ತುತಿಸುತ್ತ ಬಂದಿದ್ದರಲ್ಲದೆ, ಕಲಂಕಿತಳೆಂದು ಸ್ವಪ್ನಸಹ ಅಂದಿರಲಿಲ್ಲ. ಹೀಗೆ ಹೇಳವಿದ್ದರೆ ಆದು ರಂಗರಾಯನಿಗೆ ಎಷ್ಟರಮಟ್ಟಿಗೆ ತಾಗುತ್ತಿತ್ತೆಂಬುದನ್ನು ಹೇಳುವುದು ದುಸ್ತರವಾಗಿದ್ದರೂ, ಈ ವಿಷಯದಲ್ಲಿ ರಂಗರಾಯನು ನಿಶ್ಚಿಂತನಾಗಿದ್ದನೆಂದು ನಾವು ಹೇಳಬಲ್ಲೆವು.

ರಾತ್ರಿಯ ವಿಶ್ರಾಂತಿಯ ವೇಳೆಯಲ್ಲಿ ರಂಗರಾಯನು ಇಂತು ಯೋಚಿಸಹತ್ತಿದನು:—ಇನ್ನು ಕೆಲವುದಿನಗಳ ಮಟ್ಟಿಗಾದರೂ ಮೂರನೆಯ ಮದುವೆಯ ಸಂಗತಿಯನ್ನು ಮರೆದಿರಲಿಕ್ಕೆ ಬೇಕು. ಇದು ಅಷ್ಟು ಕಠಿಣಕಾರ್ಯವಲ್ಲ, ಆದರೆ ಇಪ್ಪತ್ತುಮೂರು-ಇಪ್ಪತ್ತನಾಲ್ಕು ವರುಷಗಳ ವಯಸ್ಸಿನ [illegible] ಹೆಂಗಸನ್ನು ಕರೆತಂದು, ಅವಳ ಮೇಲೆ ಈ ಸಂಸಾರದ ಗೃಹಿಣಿಯ ಭಾರವನ್ನು ಹೇರಿದರೆ, ದಕ್ಷಯಜ್ಞದಂತಹ ಭಯಂಕರ ಗೊಂದಲವಾಗದೆ ಬಿಡದು! ಮುಖ್ಯ

ವಾಗಿ ನಾನೀಗ ರಾಮನ ಬಗ್ಗೆ ಯೋಚಿಸಬೇಕಾಗಿದೆ. ರಾಮನ ಜನನಿಯೋ ತನ್ನ ಇಮಪರೆಗಿನ ದುರ್ದೆಶೆಯು ಮೊಲಕಾರಣಳೆಂದು ಭಾವಿಸಿದ್ದ ಅವಳು ರಾಮನನ್ನು ವಿಷದೃಷ್ಟಿಯಿಂದ ನೋಡುವದು ಸ್ವಾಭಾವಿಕವಾದದ್ದು! ಹೀಗಾಗಿ ಇದ್ದೊಬ್ಬ ಮಗನು ವಿಪತ್ತಿಗೆ ಗುರಿಯಾಗುವಂತೆ ಮಾಡುವದು ಸರಿಯಲ್ಲ. ತಂಗಿಯು ಮನೆಯೂ ಊರಲ್ಲಿಯೇ ಇದೆ. ಇವಳು ರಾಮನನ್ನು ಸರಿಯಾಗಿ ಸಂರಕ್ಷಿಸಬಲ್ಲಳು, ಆದರೆ ರಾಮನ ಸಂರಕ್ಷಣೆಯ ಭಾರವನ್ನು ಚಿರಕಾಲ ತಂಗಿಯ ಮೇಲೆ ಚಲ್ಲಿಕೊಡುವದು ಹೇಗೆ?'' ರಂಗರಾಯನಿಗೆ ಮುಂದಿನ ಯೋಚನೆಯು ಹೊಳೆಯದಾಯಿತು. ಇವನ ಯಾವತ್ತು ಕೋಪವು ದಿಗ್ಗಜನ ಮೇಲೆ ಹೊರಳಿತು. ರಂಗರಾಯನು ಇದುವರೆಗೆ ಹಲವುಸಾರೆ ಚಹ ಕುಡಿಸಿದ್ದನು. ಬಿಸ್ಕೀಟು ತಿನಿಸಿದ್ದನು. ಆ ಅರಣ್ಯಪಂಡಿತನು ಹೀಗೆ ಪ್ರತ್ಯುಪಕಾರವನ್ನು ತೀರಿಸಬೇಕೆ? ರಂಗರಾಯನು ಇನ್ನು ದಿಗ್ಗಜನಿಗೆ ಚನ್ನಾಗಿ ಕೈತೋರಿಸ ಬೇಕೆಂದು ಸಂಕಲ್ಪಿಸಿಕೊಂಡನು. ದಿಗ್ಗಜನು ಈ ಸಮಯದಲ್ಲಿ ರಂಗರಾಯನ ಹತ್ತಿರಿದ್ದರೆ ಏನಾಗುತ್ತಿತ್ತೋ ಏನೋ! ಆದರೆ ಆ ನಿಶ್ಚಿಂತಪುರುಷನು ಈ ವೇಳೆಯಲ್ಲಿ ಮನೆಯಲ್ಲಿಯ ಮೆತ್ತಗಿನ ಹಾಸುಗೆಯಮೇಲೆ ನಿದ್ರೆಯಲ್ಲಿದ್ದುದರಿಂದ ರಂಗರಾಯನ ಕೋಪದ ಪ್ರಯೋಗವು ಅವನ ಮೇಲೆ ಆಗುವಂತಿರಲಿಲ್ಲ.

ರಂಗರಾಯನು ಸ್ವಭಾವದಿಂದ ಕೆಟ್ಟವನಲ್ಲ; ಆದರೆ ಅತಿಶಯ ದುರ್ಬಲ ಪ್ರಕೃತಿಯ ಮನುಷ್ಯನಾಗಿದ್ದನು. ಕಾರಣ ಮನಲಜ್ಜೆಗಿಂತಲೂ ಜನಲಜ್ಜೆಯು ಇವನನ್ನು ಹೆಚ್ಚಾಗಿ ಪೀಡಿಸುತ್ತಿತ್ತು. ವಿದ್ಯೆಯ ಅಭಿಮಾನದೊಡನೆ ಇದಕ್ಕೂ ಪ್ರಬಲವಾದ ಮತ್ತೊಂದು ಅಭಿಮಾನವು ಇವನಲ್ಲಿ ಮನೆಮಾಡಿಕೊಂಡಿತ್ತು. ಅದು ಯಾವುದೆಂದರೆ, ನಾನು ಜ್ಞಾನತಃ ಅನ್ಯರ ವಿಷಯದಲ್ಲಿ ಕಿಂಚಿನ್ಮಾತ್ರವೂ ಅನ್ಯಾಯವನ್ನಾಚರಿಸತಕ್ಕವನಲ್ಲವೆಂಬದು. ಚಹಾಪಾರ್ಟಿಯ ಸಮಯದಲ್ಲಿ ಕೂಡಿದ್ದ ಮಿತ್ರರು ಬಾಯಿಯಿಂದ ಒಡನುಡಿಯದಿದ್ದರೂ ಮನಸಾ ತಿರಸ್ಕರಿಸಿದರೆಂಬುದನ್ನು ರಂಗರಾಯನು ಗೊತ್ತುಮಾಡಿಕೊಂಡಿದ್ದನು. ಗೆಳೆಯರ ಈ ಅವ್ಯಕ್ತ ತಿರಸ್ಕಾರವನ್ನು ಸಹಿಸಿಕೊಳ್ಳುವದು ರಂಗರಾಯನಿಗೆ ತೀರ ಅಸಹ್ಯವಾಗಿತ್ತು.

ರಂಗರಾಯನಿಗೆ ಅಂದು ಬೆಳಗಿನ ವರೆಗೆ ನಿದ್ದೆಹತ್ತಲಿಲ್ಲ. ಮನಸ್ಸಿನಲ್ಲಿ ಕಟಿಯುತ್ತಿದ್ದ ಒಂದೇ ಒಂದು ವಿಷಯದ ಬಗ್ಗೆ ದೀರ್ಘಾಲೋಚನೆ ಮಾಡಿ ಬೇಸತ್ತು ಹೋದನು; ಆದರೆ ಬೆಳಗಿನ ಜಾವದಲ್ಲಿ ಇವನಿಗೆ ಸುಲಭವಾದ ಒಂದು

ಹಂಚಿಕೆಯು ಹೊಳೆಯಿತು ಈ ಹಂಚಿಕೆಯ ಮೇರೆಗೆ ಮುಂದಿನ ಕಾರ್ಯಕ್ರಮವನ್ನು ನಿರ್ಧರಿಸಕೊಳ್ಳಹತ್ತಿದನು. "ಅವಳನ್ನು ಕರೆಯುಕಳುಹಬೇಕು. ಬಹುತರ ಅವಳು ಬರುವದಿಲ್ಲ ಬಂದರೂ ಇಲ್ಲಿ ನಾಲ್ಕೆಂಟು ದಿನಗಳಿಗಿಂತ ಹೆಚ್ಚು ಕಾಲ ಇರತಕ್ಕವಳಲ್ಲ. ಯಾಕೆಂದರೆ, ಇಲ್ಲಿಯ ಆಚಾರ-ವಿಚಾರಗಳು ಅವಳ ವ್ಯವಹಾರಕ್ಕೆ ತೀರ ವಿಪರೀತವಾದವುಗಳು. ಅವಳು ಈ ಆಚಾರ-ವಿಚಾರಗಳನ್ನು ಸಹಿಸದವಳಾಗಿ ಅಲ್ಪ ಕಾಲದಲ್ಲಿಯೇ ಮತ್ತೆ ತೌರುಮನೆಗೆ ಹೋಗಿಬಿಡುವಳು. ಆ ಬಳಿಕ ಜನರು ನನಗೆ ದೋಷಕೊಡುವಂತಿಲ್ಲ. ಅವಳು ಇಲ್ಲಿರುವವರೆಗೆ ರಾಮನನ್ನು ತಂಗಿಯಮನೆಗೆ ಕಳುಹಿಕೊಡಬೇಕು. ನಾನು ಅತ್ತಿತ್ತ ಅಡ್ಡಾಡಿ ಬರಬೇಕು. ಅವಳು ಮನೆ ಬಿಟ್ಟು ಹೋದಬಳಿಕ ಮತ್ತೆ ಮನೆಯಲ್ಲಿ ಹೊಂದಿಕೊಂಡರಾಯಿತು." ಈ ಸಹಜವಾದ ಉಪಾಯವು ಇಷ್ಟು ಹೊತ್ತಿನವರೆಗೆ ಏಕೆ ಲಕ್ಷದಲ್ಲಿ ಬಂದಿರಲಿಕ್ಕಿಲ್ಲೆಂಬದನ್ನು ಭಾವಿಸಿದ ರಂಗರಾಯನಿಗೆ ಆಶ್ಚರ್ಯವಾಗದಿರಲಿಲ್ಲ.

ರಂಗರಾಯನು ಮತ್ತಷ್ಟು ಆಲೋಚಿಸಿ ಒಮ್ಮೆ ನಿರ್ಧರಿಸಿಕೊಂಡಿದ್ದ ಹಂಚಿಕೆಯನ್ನು ಸ್ಥಿರಪಡಿಸಿಕೊಂಡು ಹಾಸುಗೆಯಿಂದೆದ್ದನು. ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು, ಮುಂದಿನ ಕೆಲಸಕ್ಕೆ ತೊಡಗಿದನು.

ರಂಗರಾಯನು ಪ್ರಿನ್ಸಿಪಾಲನಿಗೆ ಹೇಳಿಕೊಂಡು ಏಳು ದಿನಗಳ ರಜೆ ತಕ್ಕೊಂಡನು. ಮುಂಬಯಿಯಲ್ಲಿ ರಂಗರಾಯನ ಲಂಗೋಟಿ ಗೆಳೆಯನೊಬ್ಬನಿದ್ದನು. ರಂಗರಾಯನು ಇವನಿಗೆ ನಾನು ಬರುವೆನೆಂದು ತಾರ ಕಳುಹಿದನು; ಹಾಗು ತಂಗಿಯಾದ ಸುಭದ್ರೆಗೆ ಒಂದು ಪತ್ರವನ್ನು ಬರೆದು ಕಳುಹಿದನು. ಇದರಲ್ಲಿ ನಾನು ಇಂದೇ ಮುಂಬಯಿಗೆ ಹೊರಡುವೆನೆಂದೂ, ಹೊರಡುವ ಮೊದಲು ಭಾಮಿನಿಯನ್ನು ಕರೆದು ತರಲಿಕ್ಕೆ ಜನರನ್ನು ಕಳುಹುವೆನೆಂದೂ, ಅವಳು ಬಂದಳೆಂದರೆ ನೀನು ರಾಮನನ್ನು ಕರಕೊಂಡು ಹೋಗೆಂದೂ, ನಾನು ಇನ್ನು ಎಂಟು ದಿನಗಳಿಗೆ ತಿರುಗಿ ಬರುವೆನೆಂದೂ ಬರೆದಿದ್ದನು.

ರಂಗರಾಯನ ದೂರದ ಸಂಬಂಧಿಕನಾದ ತಮ್ಮನೊಬ್ಬನಿದ್ದನು. ಇವನು ವಕೀಲರ ಕಾರಕೂನನಾಗಿದ್ದನು. ಇವನು ರಂಗರಾಯನ ಮನೆಯಲ್ಲಿರದೆ, ಸ್ವಂತದ ಮನೆಯಲ್ಲಿದ್ದನು. ಪ್ರಸಂಗ ವಿಶೇಷದಲ್ಲಿ ರಂಗರಾಯನ ಹತ್ತಿರ ಬರುತ್ತಿದ್ದನು. ರಂಗರಾಯನು ಇವನನ್ನು ಕರೆಕಳುಹಿಕೊಂಡು, "ತಮ್ಮಾ, ನಾಳೆ ನೀನು ರಾಮಪುರಕ್ಕೆ ಹೋಗಿ ನಿನ್ನ ಅತ್ತಿಗೆಯನ್ನು ಕರೆತರಬೇಕು''ಎಂದು ಹೇಳಿದನು.

"ಅತ್ತಿಗೆಯೆ? ಅವಳಾರು?" ತಮ್ಮನು ವಿಸ್ಮಯದಿಂದ ಕೇಳಿದನು.

"ನಿನಗೆ ಗೊತ್ತಿಲ್ಲವೆ? ರಾಮಪುರಕ್ಕೆ ನನ್ನೊಡನೆ ನೀನೂ ಲಗ್ನಕ್ಕೆ ಬಂದಿದ್ದೆಯಲ್ಲ. ವೇಣುಗೋಪಾಲಾಚಾರ್ಯರನ್ನು ಪೂರಾ ಮರೆದು ಬಿಟ್ಟಿರುವೆಯೇನು?" ರಂಗರಾಯನು ಕೇಳಿದನು.

"ಓಹೊ, ಪೂರಾ ನೆನಪಿದೆ; ಆದರೆ ಅವರಲ್ಲಿಯ ಯಾರೂ ನನ್ನನ್ನು ಗುರುತಿಸಲಾರರು. ಅವರು ಅತ್ತಿಗೆಯನ್ನು ನನ್ನ ಸಂಗಡ ಕಳಹುವದೆಂತು?" ತಮ್ಮನು ಕೇಳಿದನು.

"ಕಳುಹದಿದ್ದರಿಲ್ಲ! ನೀನೇನೂ ಆಗ್ರಹಮಾಡುವ ಕಾರಣವಿಲ್ಲ! ನೀನು ಅಲ್ಲಿಗೆ ಹೋಗಿ ನನ್ನ ಆದೇಶವನ್ನು ತಿಳುಹು. ಬಂದರೆ ಬರಲಿ, ಒಲ್ಲದಿದ್ದರೆ ಬಿಡಲಿ! ಮೋಟಾರ ತಕ್ಕೊಂಡು ಹೋಗು. ಸೇವಕರನ್ನೂ ಪರಿಚಾರಿಕೆಯನ್ನೂ ಸಂಗಡ ಕರಕೊಂಡು ಹೊರಡು. ಅವಳು ಬರುವದಿಲ್ಲೆಂದು ಹೇಳಿದ ಕೂಡಲೆ ಬೇರೆ ಮಾತಾಡದೆ ಹೊರಟು ಬಾ" ರಂಗರಾಯನು ಹೇಳಿದನು.

ತಮ್ಮನು ಆಶ್ಚರ್ಯಾನ್ವಿತನಾಗಿ ಅಣ್ಣನ ಮೋರೆಯನ್ನು ನೋಡುತ್ತ ನಿಂತನು ಕೆಲಕಾಲದ ಮೇಲೆ: "ಆಗಲಿ, ನೀನು ಹೇಳಿದಂತೆ ಮಾಡುವೆನು" ಎಂದು ನುಡಿದು ಸುಮ್ಮನಾದನು.

ರಂಗರಾಯನು ಅವನ ಕೈಯಲ್ಲಿ ರೂಪಾಯಿಗಳನ್ನೂ, ಕೀಲಿಯಕೈಯನ್ನೂ ಕೊಟ್ಟು ಇಂತು ಹೇಳಿದನು:-"ನಾನು ಇಂದಿನ ರಾತ್ರಿಯ ಗಾಡಿಯಿಂದ ಮುಂಬಯಿಗೆ ಹೋಗುವೆನು. ಎಂಟುದಿನಗಳ ತರುವಾಯ ಮರಳಿ ಬರುವೆನು. ಅವಳು ಬಂದರೆ, ಅವಳ ಕೈಯಲ್ಲಿ ಈ ಬೀಗದ ಕೈಯನ್ನು ಕೊಡು. ನನ್ನ ಕೋಣೆಯಲ್ಲಿಯ ಸಂದುಕವನ್ನು ತೋರಿಸು. ಅದರಲ್ಲಿ ರೂಪಾಯಿಗಳಿವೆ. ಅವಳಿಗೆ ಆ ರೂಪಾಯಿಗಳನ್ನು ತಕ್ಕೊಂಡು ಸಂಸಾರವನ್ನು ಸಾಗಿಸಬೇಕೆಂದು ಸೂಚಿಸು. ನಿನ್ನೆ ಪಗಾರ ತಕ್ಕೊಂಡಿದ್ದೇನೆ. ಅವು ಒಂದು ತಿಂಗಳ ಸಾಲಬೇಕು"

"ಅಣ್ಣಾ, ಒಮ್ಮೆಲೆ ನಿನಗೆ ಹೀಗೆ ಲಹರಿಯೆದ್ದದ್ದೇಕೆ? ಸ್ವೇಚ್ಛೆಯಿಂದ ನೀರಲ್ಲಿ ಸಂಚರಿಸುತ್ತಿರುವ ಮೀನವನ್ನು ಬಿಸಿಲಿನಲ್ಲಿ ತಂದು ಬಿಸುಡುವದರಲ್ಲಿ ಪ್ರಯೋಜನವೇನು?" ತಮ್ಮನು ಕೇಳಿದನು.

ರಂಗರಾಯನು ಕ್ಷಣಕಾಲ ನೀರವವಾಗಿದ್ದು ಆಲೋಚಿಸಿದನು. ಬಳಿಕ ನಿಟ್ಟುಸಿರಬಿಟ್ಟು ಹೇಳಹತ್ತಿದನು:-"ತಮ್ಮಾ, ಅವಳು ಇಲ್ಲಿಗೆ ಬರುವುದಿಲ್ಲೆಂಬುದು ನಿಶ್ಚಿತವಾದದ್ದು. ಆದರೂ ನಾವು ಲೋಕತಃ ಧರ್ಮತಃ ನಮ್ಮ ಕರ್ತವ್ಯವನ್ನು ಮಾಡಲೇ ಬೇಕಷ್ಟೆ? ಅವಳು ಬರದಿದ್ದರೆ, ಜನಾಪವಾದವನ್ನು ನಾವು ಸಹಜ

ವಾಗಿ ಹೋಗಲಾಡಿಸಿಕೊಂಡಂತಾಗುವದಿಲ್ಲವೆ? ಇರಲಿ. ನಾನು ಹೇಳಿದಂತೆ ಮಾಡು. ಅವಳು ಬಂದರೆ, ಸುಭದ್ರೆಗೆ ಸುದ್ದಿಯನ್ನು ತಿಳಿಸು. ಸುಭದ್ರೆಯು ರಾಮನನ್ನು ತನ್ನ ಮನೆಗೆ ಕರೆದುಕೊಂಡು ಹೋಗಲಿ."

ರಂಗರಾಯನು ರಾತ್ರಿಯ ಪ್ಯಾಸೆಂಜರ ಬಂಡಿಯನ್ನೇರಿ ಮುಂಬಯಿಯ ಕಡೆಗೆ ನಡೆದನು.

---

## ೩

ಸಂಜೆಹೊತ್ತಿನ ಸಮಯದಲ್ಲಿ ಮೋಟರ ಬಂಡಿಯೊಂದು ಬಂದು ರಂಗ ರಾಯನ ಮನೆಯ ಮುಂದೆ ನಿಂತಿತು, ಹಾಗು ಒಂದೆರಡು ನಿಮಿಷಗಳಲ್ಲಿ ಇಪ್ಪತ್ತೆರಡು ವರುಷಗಳ ವಯಸ್ಸಿನ ರಮಣಿಯೊಬ್ಬಳು ಹೊರಬಿದ್ದು, ರಂಗರಾಯನ ಮನೆಯನ್ನು ಹೊಕ್ಕಳು. ಭಾಮಿನಿಯು ದಿವಾನಖಾನೆಯಲ್ಲಿ ಒಂದು ಕುರ್ಚಿಯ ಮೇಲೆ ಕುಳಿತಿದ್ದಳು. ರಾಮನು ಭಾಮಿನಿಯ ತೊಡೆಯಮೇಲೆ ಕುಳಿತು ಪುಸ್ತಕ ದೊಳಗಿನ ಚಿತ್ರಗಳನ್ನು ನೋಡುತ್ತಿದ್ದನು, ಹಾಗು ತನಗೆ ಚಂದ ಕಂಡ ಚಿತ್ರ ಗಳನ್ನು ಭಾಮಿನಿಗೆ ತೋರಿಸುತ್ತಿದ್ದನು.

ಆಗಂತುಕ ರಮಣಿಯು ಕಾಲಸಪ್ಪಳದಿಂದ ಮೊದಲು ರಾಮನು ಮುಖ ವೆತ್ತಿ ನೋಡಿದನು. ಅತ್ತೆಯೆಂದು ಕಂಡುಕೊಂಡು ಆನಂದದಿಂದ. "ಅವ್ವಾ, ಅಲ್ಲಿ ನೋಡು ಅತ್ತೆಯು ಬಂದಿದ್ದಾಳೆ," ಎಂದು ಹೇಳಿದನು. ಭಾಮಿನಿಯು ಎದ್ದು ನಿಂತು ಆ ಕಡೆಗೆ ನೋಡಿದಳು. ಭಾಮಿನಿಯು ಉಟ್ಟಿದ್ದುದು ಸಾದಾ ಸೀರೆ ಕುಪ್ಪಸವನ್ನು ಧರಿಸಿದ್ದಳು. ಮೈಮೇಲೆ ಸಾಮಾನ್ಯ ತರಗತಿಯ ಅಲಂಕಾ ರಗಳು ಮಾತ್ರ ಇದ್ದುವು. ಹೀಗೆ ಸಾಮಾನ್ಯ ವಸನಭೂಷಣಗಳಲ್ಲೂ ಒಡೆದು ಕಾಣುತ್ತಿರುವ ಭಾಮಿನಿಯ ಚೆಲುವಿಕೆಯನ್ನು ನೋಡಿ, ಸುಭದ್ರೆಯು ಬೆರಗಾದಳು.

ಭಾಮಿನಿಯೇ ಮಾತಾಡಲಾರಂಭಿಸಿದಳು. ಮುಗುಳು ನಗೆಯಿಂದ 'ರಾಮು, ಅತ್ತೆಗೆ ನಮಸ್ಕಾರ ಮಾಡಲಿಲ್ಲವಲ್ಲಪ್ಪಾ?' ಎಂದು ಕೇಳಿದಳು.

ರಾಮನಿಗೆ ಈ ಶಿಕ್ಷಣವು ಹೊಸದು. ಇವನು ಮಲತಾಯಿಯ ಮಾತನ್ನು ಮೀರಲಾರದೆ ಅತ್ತೆಯ ಹತ್ತಿರ ಬಂದನು. ಬೂಟುಗಳಿಂದಾಚ್ಛಾ ದಿತವಾದ ಅತ್ತೆಯ ಪಾದಪದ್ಮಗಳಮೇಲೆ ಹಣೆಯನ್ನಿರಿಸಿ ಮತ್ತೆ ಎದ್ದು ನಿಂತನು. ತಾಯಿಯ ಹತ್ತರ ಹೋದನು. "ತಂಗೀ, ಹೀಗೆ ಬಾ; ಇಲ್ಲಿ ಕುಳಿತುಕೊಳ್ಳು" ಭಾಮಿನಿಯು ನುಡಿದಳು.

"ನೀನು ಯಾವಾಗ್ಗೆ ಬಂದೆ?" ಸುಭದ್ರೆಯು ಕೇಳಿದಳು.

"ಸೋಮವಾರ ಬಂದೆನು. ಇಂದು ಬುಧವಾರ. ಮೂರು ದಿನಗಳಾದವು. ತಂಗಿ, ಹೀಗೆ ನಿಂತೇ ಎಷ್ಟು ಹೊತ್ತು ಮಾತಾಡುವೆ? ಇಲ್ಲಿ ಕುಳ್ಳಿರ ಬಾ." ಭಾಮಿನಿಯು ನುಡಿದಳು.

ಸುಭದ್ರೆಯು ಸ್ನೇಹಬೆಳಸುವುದಕ್ಕೆ ಬಂದವಳಲ್ಲ. ಕೋಪದಿಂದ ಮನೆ ಬಿಟ್ಟು ಹೊರಟಿದ್ದಳು. ಕಾರಣ ಅವಳು: "ಇಲ್ಲ. ನಾನು ಕುಳ್ಳಿರುವಂತಿಲ್ಲ. ನನಗೆ ಇನ್ನೂ ಬಹಳ ಕೆಲಸಗಳಿವೆ. ಈಗ ನಾನು ರಾಮುನನ್ನು ಕರೆದೊಯ್ಯಲಿಕ್ಕೆ ಬಂದಿದ್ದೇನೆ," ಎಂದು ಹೇಳಿದಳು.

ಭಾಮಿನಿಯು ಕೋಪಗೊಳ್ಳಲಿಲ್ಲ. ಸುಭದ್ರೆಯ ರುಕ್ಷ ಮಾತುಗಳ ಉತ್ತರವನ್ನು ನಗೆಮೊಗದಿಂದಲೆ ನುಡಿದಳು:-"ತಂಗೀ, ರಾಮುನು ಹೋದರೆ, ನಾನೊಬ್ಬಳೆ ಇಲ್ಲಿ ಹೇಗೆ ಇರಲಿ? ನನ್ನ ಅಣ್ಣಂದಿರ ಸಂಸಾರದಲ್ಲಿ ಬಹಳ ಹುಡುಗರಿದ್ದರು. ಇದುವರೆಗೆ ನಾನು ಆ ಹುಡುಗರ ಸಾನ್ನಿಧ್ಯದಲ್ಲಿ ಕಾಲಕಳೆದದಳು. ಹತ್ತರ ಹುಡುಗರಿರದಿದ್ದರೆ, ನನಗೆ ಹೊತ್ತೇ ಹೋಗದ ಹಾಗಾಗುತ್ತದೆ."

ಸುಭದ್ರೆಯು ಅತ್ತಿಗೆಯ ಮಾತಿಗೆ ಉತ್ತರಕೊಡಬಯಸಲಿಲ್ಲ. ರಾಮುನ ಕಡೆಗೆ ಹೊರಳಿ:—"ಮಗು ನಿಮ್ಮಪ್ಪನು ನಿನ್ನನ್ನು ನನ್ನ ಮನೆಗೆ ಕರೆದೊಯ್ಯೆಂದು ಹೇಳಿದ್ದಾನೆ. ನಾನು ಈಗ ನಿನ್ನನ್ನು ಕರೆದುಕೊಂಡು ಹೋಗುವೆನು. ಏಳು, ಅಂಗಿಟೊಪ್ಪಿಗೆಗಳನ್ನು ಹಾಕಿಕೊಂಡು ಸಿದ್ಧನಾಗು. ನನಗೆ ಬಹಳ ಅವಸರವಿದೆ. ನಾನಿನ್ನುಮೇಲೆ ಮಾರ್ಕೆಟಿಗೆ ಹೋಗಿ, ಸಾಮಾನುಗಳನ್ನು ಖರೀದಿ ಮಾಡಿಕೊಂಡು ಮನೆಗೆ ಹೋಗಬೇಕಾಗಿದೆ" ಎಂದು ನುಡಿದಳು.

ರಾಮುನು ಗೊಂದಲಕ್ಕೊಳಗಾದನು. ಇವನು ಭಯಗೊಂಡವನಾಗಿ ಸಣ್ಣಮೋರೆಮಾಡಿ:— "ಅತ್ತಿ, ಅವ್ವನು ಹೋಗಬೇಕೆಂದು ಹೇಳಿದ್ದಾಳೆ," ಎಂದು ನುಡಿದು ಸುಮ್ಮನಾದನು. ರಾಮುನ ಮನಸ್ಥಿತಿಯನ್ನು ತಿಳಿದು ಭಾಮಿನಿಯು ಮಾತಾಡಲಾರಂಭಿಸಿದಳು:-"ಮಗು, ನಾನು ನಿನಗೆ ಹೋಗಬೇಡವೆಂದು ಯಾವಾಗ್ಗೆ ಹೇಳಿದೆನಪ್ಪಾ? ಹೋಗೆಂದು ಹೇಳಿದವಳಲ್ಲ, ಬೇಡೆಂದೂ ಅಂದವಳಲ್ಲ. ನೀನು ಇಲ್ಲಿಂದ ನಿನ್ನ ಅತ್ತೆಯ ಮನೆಗೆ ಹೋದರೆ, ನನಗೆ ಇಲ್ಲಿರುವುದು ಬೇಜಾರವಾಗುವದೆಂದು ನುಡಿದದ್ದು ಮಾತ್ರ ನಿಜವು."

ರಾಮುನು ಯಾವ ಮಾತನ್ನೂ ಆಡಲಿಲ್ಲ. ಮಲತಾಯಿಯ ತೀರ ಸನಿಯಕ್ಕೆ ಬಂದು, ಅವಳ ಸೆರಗನ್ನು ಹಿಡಕೊಂಡು ನಿಂತುಬಿಟ್ಟನು. ಭಾಮಿ

ಸಿದಳು ಅವನ ತಲೆಯಮೇಲೆ ಕೈಯಾಡಿಸುತ್ತ ನಗೆಮೊಗದಿಂದ:-"ತಂಗಿ, ಇವನು ನಿನ್ನೊಡನೆ ಬರಲಿಕ್ಕೆ ಮನಸ್ಸಿಲ್ಲದವನಾಗಿದ್ದಾನೆ," ಎಂದು ಹೇಳಿದಳು

ಲಜ್ಜೆಯಿಂದಲೂ, ಕೋಪದಿಂದಲೂ ಸುಭದ್ರೆಯ ಮುಖವು ಕಪ್ಪಿಟ್ಟಿತು. ಈ ನಾಗರಿಕ ರಮಣಿಯು ಎಷ್ಟೇ ಓದು ಬರಹ ಕಲಿತಿದ್ದರೂ ತನ್ನ ಈ ವಿಕಾರ ಗಳನ್ನು ಹತ್ತಿಕ್ಕಿಕೊಳ್ಳಲಸಮರ್ಥಳಾಗಿ ಇಂತು ನುಡಿದಳು:- "ರಾಮನು ನನ್ನೊ ಡನೆ ಹೊರಡುವದು ಉಚಿತವಾದದ್ದು. ನೀನು ಅವನಿಗೆ ಅನ್ಯಾಯ ರೀತಿಯಿಂದ ಸಲುಗೆಯನ್ನು ಕೊಡದಿದ್ದರೆ, ಅವನು ತನ್ನ ತಂದೆಯ ಮಾತನ್ನು ಮೀರುತ್ತಿರ ಲಿಲ್ಲವೆಂದೇ ನಾನು ಭಾವಿಸಿರುವೆನು."

ಭಾಮಿನಿಗೆ ಕೋಪವುಂಟಾಯಿತು. ಇವಳ ಕುಟಿಗಳು ಕೊಂಚ ನಡು ಗಿದವು. ಮತ್ತೆ ಯಾವ ಪರಿವರ್ತನೆಯೂ ಕಂಡು ಬರಲಿಲ್ಲ. ಇವಳು ಸೌಮ್ಯ ರೀತಿಯಿಂದಲೆ ಹೀಗೆ ಹೇಳಹತ್ತಿದಳು:—"ತಂಗಿ, ಮುಂದು ಕರಾಗಬಂದಿದ್ದ ನಮ್ಮಂಥವರೂ ಉಚಿತವನ್ನು ಆಚರಿಸಲಾರದವರಾಗಿರುವೆವು. ರಾಮನಿನ್ನೂ ಹಸುಗೂಸು. ಇವನಿಗೆ ಉಚಿತಾನುಚಿತಗಳ ತಿಳುವಳಿಕೆಯೆಲ್ಲಿಯದು? ತಂಗಿ, ನಾನು ಇವನಿಗೆ ಅಚ್ಚುಗಲಿಸಿರುವೆನೆಂದು ಅಂದೆಯಲ್ಲವೆ? ಆದರೆ ಇದಕ್ಕಾಗಿ ನೀನು ಚಿಂತಿಸುವ ಕಾರಣವಿಲ್ಲ. ಅಣ್ಣಂದಿರ ಹಲವು ಎಳೆಮಕ್ಕಳನ್ನು ನಾನು ದೊಡ್ಡ ವರನ್ನಾಗಿ ಮಾಡಿದ್ದೇನೆ. ಹುಡುಗರಿಗೆ ಯಾವದು ಹಿತಕರವು? ಯಾವದು ಅಹಿತಕರವು? ಎಂಬುದು ನಿನಗಿಂತಲೂ ನನಗೆ ಚನ್ನಾಗಿ ಹೊಳೆಯುತ್ತಿದೆ."

"ನಾನು ಅಣ್ಣನಿಗೆ ಪತ್ರ ಬರೆಯುವೆನು" ಸುಭದ್ರೆಯು ಕಠೋರ ಸ್ವರ ದಿಂದಲೆ ನುಡಿದಳು.

"ಬರೆ, ನಾನು ಬೇಡೆನ್ನುವದಿಲ್ಲ. ಇವರು ಅಲಹಾಬಾದದಲ್ಲಿ ಕುಳಿತು ಕೊಡುವ ಅಪ್ಪಣೆಗಳನ್ನು ಪಾಲಿಸುವದಕ್ಕಿಂತ ಇಲ್ಲಿಯ ನನ್ನ ಕರ್ತವ್ಯವನ್ನು ಪಾಲಿಸುವುದು ಶ್ರೇಯಸ್ಕರವೆಂದು ನಾನು ಭಾವಿಸುತ್ತೇನೆ. ಏನೇ ಇರಲಿ, ತಂಗಿ, ಈ ಪ್ರಸಂಗದಲ್ಲಿ ನಾನೊಂದು ಮಾತು ನಿನಗೆ ಹೇಳುತ್ತೇನೆ. ಇದನ್ನು ಚನ್ನಾಗಿ ನೆನಪಿನಲ್ಲಿಟ್ಟುಕೊ. ನಾನು ವಯಸ್ಸಿನಿಂದ ನಿನಗಿಂತ ಹಿರಿಯಳು; ಸಂಬಂಧದಿಂದಲೂ ಹಿರಿಯಳು. ಕಾರಣ ನೀನು ನನ್ನ ಮೇಲೆ ನಿನ್ನ ಅಭಿಮಾನ ವನ್ನು ತೋರಲಾರೆ." ಭಾಮಿನಿಯು ತುಸ ನಕ್ಕು ಮತ್ತೆ ಹೇಳಹತ್ತಿದಳು:— "ತಂಗಿ, ಇಂದು ನಾನು ನಿನ್ನನ್ನು ಬಹಳವಾಗಿ ಕರೆದೆನು. ಆದರೆ ಸಿಟ್ಟಿನ ಭರದ ಲ್ಲಿರುವ ನೀನು ನನ್ನ ಸಮೀಪಕ್ಕೆ ಬರಲಿಲ್ಲ; ಕುಳ್ಳಿರಲಿಲ್ಲ. ಆದರೆ ಮುಂದೆ

ಒಂದು ದಿನ ನೀನೇ ನಿನ್ನ ಅಂತಃಪ್ರೇರಣೆಯಿಂದ ಈ ಅತ್ತಿಗೆಯನ್ನು ಹುಡುಕಿಕೊಂಡು ಈ ಮನೆಗೆ ಬರುವೆ. ಈ ಅತ್ತಿಗೆಯ ಹತ್ತಿರ ಕುಳಿತು ಸ್ನೇಹ ಸಂಭಾಷಣೆ ಮಾಡುವೆ.”

ಸುಭದ್ರೆಯು ಈ ಮಾತಿನ ಉತ್ತರ ಕೊಡಲಿಚ್ಛಿಸಲಿಲ್ಲ. ಇವಳು “ಇಂದು ನನಗೆ ಅವಕಾಶವಿಲ್ಲದಾಗಿದೆ. ಹೋಗಿ ಬರುವೆನು. ನಮಸ್ಕಾರ” ಎಂದಂದು ಭರದಿಂದ ಹೊರಬಿದ್ದಳು. ಮೋಟರಿನಲ್ಲಿ ಕುಳಿತ ಬಳಿಕ ಮೋರೆಯೆತ್ತಿ ಮತ್ತೆ ಅಣ್ಣನ ಮನೆಯ ಕಡೆಗೆ ನೋಡಿದಳು. ಭಾಮಿನಿಯೂ ರಾಮನೂ ಚಂದ್ರಶಾಲೆಯಲ್ಲಿಯ ಗಜಗಳನ್ನು ಹಿಡಕೊಂಡು ನಿಂತು, ತನ್ನನ್ನೇ ನೋಡುತ್ತಿರುವುದನ್ನು ಕಂಡಳು.

---



ರಂಗರಾಯನು ಏಳು ದಿನಗಳ ರಜೆಯನ್ನು ತಕ್ಕೊಂಡಿದ್ದನು; ಆದರೆ ಹದಿನೈದು ದಿನಗಳನ್ನು ಮುಂಬಯಿಯಲ್ಲಿ ಕಳೆದನು. ಬಳಿಕ ಒಂದುದಿನ ಸಾಯಂಕಾಲದಲ್ಲಿ ಮತ್ತೆ ತನ್ನ ಮನೆಗೆ ಬಂದನು ರಾಮನು ಬಾಗಿಲ ಹತ್ತಿರ ಕುಳಿತಿದ್ದನು. ಅವನ ಸಮೀಪದಲ್ಲಿ ಅತ್ತಿತ್ತ ಕಾಗದ, ಅಂಟು, ದಾರ ಮುಂತಾದವು ಬಿದ್ದಿದ್ದವು. ರಾಮನು ಈ ಒಡವೆಗಳನ್ನುಪಯೋಗಿಸಿ ಯಾವುದೋ ಒಂದು ಕೆಲಸಮಾಡುವುದರಲ್ಲಿ ತಲ್ಲೀನನಾಗಿದ್ದನು ಕಾರಣ ಇವನು ಕೆಲಕಾಲ ತಂದೆ ಬಂದುದನ್ನು ನೋಡಲಿಲ್ಲ. ರಂಗರಾಯನಾದರೂ ಮಗನ ಆಟವನ್ನು ನೋಡುತ್ತ ನಿಂತುಬಿಟ್ಟನು. ಮುಂದೆ ತುಸ ಹೊತ್ತಿನಮೇಲೆ ರಾಮನು ಮುಖವೆತ್ತಿ ನೋಡಿದನು. ತಂದೆಯನ್ನು ಕಂಡನು. ಎದ್ದು ಬಂದನು. ಸಾಷ್ಟಾಂಗ ನಮಸ್ಕಾರ ಮಾಡಿದನು. ಹಿರಿಯರನ್ನು ಕಂಡೊಡನೆಯೆ ನಮಸ್ಕಾರ ಮಾಡಬೇಕೆಂಬ ಶಿಕ್ಷಣದಲ್ಲಿ ರಾಮನು ಇನ್ನೂ ಪೂರಾ ನುರಿತಿರಲಿಲ್ಲವೆಂಬುದು ಇವನ ಮುಖಮುದ್ರೆಯಿಂದ ಕಂಡುಬರುವಂತಿತ್ತು. ರಂಗರಾಯನಿಗೆ ಈ ನಮಸ್ಕಾರದ ಪದ್ಧತಿಯು ಪ್ರೀತಿಯನ್ನುಂಟುಮಾಡದಿದ್ದರೂ, ವಿಸ್ಮಯಕರವಾಗಿ ಕಂಡಿತು. ಇವನು ಅತ್ತಿತ್ತ ಅವ್ಯವಸ್ಥೆಯಿಂದ ಬಿದ್ದುಕೊಂಡಿದ್ದ ಕಾಗದ,-ಸಿಬಿಕೆ-ದಾರಗಳ ಕಡೆಗೆ ನೋಡಿ:—“ರಾಮೂ, ಇನೇನು? ಇಲ್ಲಿ ಹೀಗೇಕೆ ಬಿದ್ದಿವೆ?” ಎಂದು ಕೇಳಿದನು.

ರಾಮನು ಒಮ್ಮೆಲೆ ರಹಸ್ಯಭೇದವನ್ನು ಮಾಡಬಯಿಸಲಿಲ್ಲ. "ಅಪ್ಪಾ, ನಾನೇನು ಮಾಡುತ್ತಿದ್ದೆನೆಂಬದನ್ನು ನೀನೆ ಹೇಳಿಕೊಡು, ನೋಡೋಣ" ಎಂದು ಅಂದನು.

"ನನಗೆ ಹೇಗೆ ಗೊತ್ತಾಗಬೇಕಪ್ಪಾ? ನೀನೇ ಹೇಳಿ ಬಿಡು" ರಂಗರಾಯನೆಂದನು.

ರಾಮನು ಚಪ್ಪಾಳೆ ಬಾರಿಸಿ ಮಹಾನಂದದಿಂದ "ಅಪ್ಪಾ, ನಿನಗೆ ಗೊತ್ತಾಗಲಿಲ್ಲವೆ? ನಾನು ಆಕಾಶದೀಪವನ್ನು ಮಾಡುತ್ತಿದ್ದೆನು," ಎಂದು ನುಡಿದನು.

"ಆಕಾಶದೀಪ? ಅಂದರೇನು? ಅದನ್ನೇಕೆ ಮಾಡುತ್ತಿದ್ದೆ?" ರಂಗರಾಯನು ಕೇಳಿದನು.

ರಾಮನು ಆಕಾಶದೀಪದ ಅದ್ಭುತ ವಿವರಣೆಯನ್ನು ಇಂದು ಮುಂಜಾವಿನಲ್ಲಿ ತಾಯಿಯಿಂದ ಕೇಳಿಕೊಂಡಿದ್ದನು. ಹೇಳಹತ್ತಿದನು:-"ಇನ್ನು ಬರುವದು ಕಾರ್ತಿಕಮಾಸ. ಆ ಮಾಸದಲ್ಲಿ ದೀಪಕ್ಕೆ ಬಹಳ ಮಹತ್ವವಿರುವದಂತೆ. ಮನೆಯಮುಂದೆ ಉದ್ದನ್ನ ಬಿದಿರನಿಲ್ಲಿಸಿ, ಅದಕ್ಕೆ ಆಕಾಶದೀಪವನ್ನು ಕಟ್ಟಬೇಕು; ಸ್ವರ್ಗದಲ್ಲಿರುವ ನಮ್ಮ ಅಜ್ಜ-ಮುತ್ತಜ್ಜರು ಈ ಬೆಳಕನ್ನು ನೋಡಿ ಸಂತೋಷಬಟ್ಟು ನಮ್ಮನ್ನು ಆಶೀರ್ವದಿಸುವರು."

ರಂಗರಾಯನ ಮನಸ್ಸು ಶಾಂತವಿರಲಿಲ್ಲ. ಮಗನ ಭಾವಿಕತನದ ಮಾತುಗಳನ್ನು ಕೇಳಿ ಇವನಿಗೆ ತುಂಬ ಕೋಪವುಂಟಾಯಿತು. "ಪಿತೃಪುರುಷರು ಸ್ವರ್ಗದಲ್ಲಿರುವರೇ? ಅವರು ನಿನ್ನ ಈ ದೀಪವನ್ನು ನೋಡುವರೆ? ನಿನಗೆ ಆಶೀರ್ವಾದ ಮಾಡುವರೆ? ಮೂರ್ಖನೆ, ನಡೆಯುತ್ತ!" ಎಂದಂದು ತಯಾರವಾಗುತಲಿದ್ದ ಆಕಾಶದೀಪವನ್ನು ಒದ್ದುಬಿಟ್ಟನು. ಆಕಾಶದೀಪವು ಮುರಿದು ಹೋಗಿ ಅತ್ತಿತ್ತ ಹರಡಿಹೋಯಿತು.

ತನ್ನ ಪ್ರೀತಿಯ ಆಕಾಶದೀಪವು ಮುರಿದುಹೋಗಿ ಅತ್ತಿತ್ತ ಹೊರಳಾಡುತ್ತಿರುವದನ್ನು ಕಂಡ ರಾಮನಿಗೆ ಬಹಳ ದುಃಖವಾಯಿತು. ಕಣ್ಣುಗಳಿಂದ ಅಶ್ರುಗಳುದಿರಹತ್ತಿದವು. ಇನ್ನು ಇವನು ದೊಡ್ಡದನಿಯಿಂದ ಅಳುವುದರಲ್ಲಿದ್ದನು. ಅಂತಸ್ತಿನ ಮೇಲಿದ್ದು ಇದನ್ನೆಲ್ಲ ನೋಡಿದ ಭಾಮಿನಿಯು ಕೋಮಲಸ್ವರದಿಂದ: "ಅಪ್ಪಾ ರಾಮು, ಅಳಬೇಡ ಸುಮ್ಮನಾಗು. ಇಲ್ಲಿ ಬಾ. ನಾನು ನಾಳಿನ ದಿನ ಅದಕ್ಕೂ ಚಂದವಾದ ಆಕಾಶದೀಪವನ್ನು ಪೇಟೆಯಿಂದ ತರಿಸಿ ನಿನಗೆ ಕೊಡು

ವೆನು.'' ಎಂದು ಉಚ್ಚರಿಸಿದಳು. ರಾಮನು ಕಣ್ಣು ಒರಸಿಕೊಳ್ಳುತ್ತ ತಾಯಿಯ ಬಳಿಗೆ ನಡೆದನು. ರಂಗರಾಯನು ಅತ್ತಿತ್ತ ನೋಡದೆ, ರಭಸದಿಂದ ಹೊರಟು, ತನ್ನ ಕೋಣೆಯನ್ನು ಪ್ರವೇಶಿಸಿದನು. ಕೊಂಚಹೊತ್ತಿನ ಮೇಲೆ ಆ ಕೋಣೆಯಲ್ಲಿ ಟುನ್ ಟುನ್ ಟುನ್ ಎಂದು ಗಂಟೆಯು ಸಪ್ಪಳವಾಯಿತು; ಆದರೆ ಗಂಟೆಯು ಸಪ್ಪಳದ ಇಂಗಿತದಂತೆ ಸೇವಕರಾರೂ ಕೋಣೆಯನ್ನು ಪ್ರವೇಶಿಸಲಿಲ್ಲ.

“ಖಾದೀರ'' ಎಂದು ರಂಗರಾಯನು ಕೂಗಿದನು; ಆದರೆ ಖಾದೀರನು ಬರಲಿಲ್ಲ. ಕೆಲಹೊತ್ತಿನಮೇಲೆ ರಂಗರಾಯನು ಮತ್ತೆ “ಲಚೀಮ'' ಎಂದು ಕೂಗಿದನು. ಲಚಿಮನೂ ಬರಲಿಲ್ಲ. ಆದರೆ ತುಸಹೊತ್ತಿನ ತರುವಾಯ ಅಡಿಗೆಯ ಭಚಾರಿಯಾಗಿದ್ದ ಶೇಷನು ಕೋಣೆಯನ್ನು ಪ್ರವೇಶಿಸಿ, ರಂಗರಾಯನ ಹತ್ತರ ಹೋಗಿ, ವಿನಯದಿಂದ ನಿಂತುಕೊಂಡನು.

“ಮೂರ್ಖರೆ, ಒದರಿ-ಒದರಿ ಸಾಕಾಗಿ ಹೋಯಿತು! ಎಲ್ಲಿಗೆ ಹೋಗಿದ್ದಿರಿ? ಜೀವದಿಂದಾದರೂ ಇದ್ದೀರೊ ಇಲ್ಲವೊ?'' ರಂಗರಾಯನು ಹೆಚ್ಚುತ್ತಲಿರುವ ಕೋಪದಿಂದ ನುಡಿದನು.

“ಮನೆಯಲ್ಲಿಯೇ ಇದ್ದೆನು. ಕೆಲಸದಲ್ಲಿ ತೊಡಗಿದ್ದೆನು. ಕಾರಣ ಬರಲಿಕ್ಕೆ ತುಸ ತಡವಾಯಿತು.'' ಶೇಷನು ನಮ್ರತೆಯಿಂದ ನುಡಿದನು.

“ಖಾದೀರನೆಲ್ಲಿ?'' ರಂಗರಾಯನು ಕೇಳಿದನು.

“ಖಾದೀರನು ತನ್ನ ಊರಿಗೆ ಹೋಗಿದ್ದಾನೆ.'' ಶೇಷನು ಹೇಳಿದನು.

“ಅವನನ್ನು ಕಳುಹಿಕೊಟ್ಟವರಾರು? ಅವನು ನನ್ನನ್ನು ವಿಚಾರಿಸದೆ ಊರಿಗೆ ಹೋದದ್ದೇಕೆ?''

“ಬಾಯಿಸಾಹೇಬರು ಅವನಿಗೆ ಅಪ್ಪಣೆಕೊಟ್ಟು ಕಳುಹಿದ್ದಾರೆ.'' ಶೇಷನು ಹೇಳಿದನು.

“ಲಚಿಮನೆಲ್ಲಿ?'' ಮತ್ತೆ ರಂಗರಾಯನು ಕೇಳಿದನು.

“ಅವನೂ ತನ್ನ ಊರಿಗೆ ಹೋದನು. ಬಾಯಿಸಾಹೇಬರು ಅಪ್ಪಣೆ ಕೊಟ್ಟು ಕಳಿಸಿದರು.''

ರಂಗರಾಯನು ಸ್ತಂಭಿತನಾಗಿ “ಈಗ ಈ ಮನೆಯಲ್ಲಿ ದಾಸ-ದಾಸಿಯರಾರೂ ಇಲ್ಲವೇನು?'' ಎಂದು ಕೇಳಿದನು.

“ಅವರಿಬ್ಬರ ಹೊರತು ಎಲ್ಲರೂ ಇದ್ದೇವೆ.'' ಶೇಷನು ನುಡಿದನು.

“ನೀವಾದರೂ ಯಾಕೆ ಇರುವಿರಿ? ದೂರ ಹಾಳಾಗಿ ಹೋಗಿರಿ!.......''

ಶೀಷನು ರಂಗರಾಯನ ಮುಂದಿನ ಮಾತನ್ನು ಕೇಳಲಿಕ್ಕೆ ಅಲ್ಲಿ ನಿಲ್ಲದೆ, ಭಯ ದಿಂದ ಪಲಾಯನ ಮಾಡಿದನು.

ರಂಗರಾಯನು ತಾನೇ ತನ್ನ ಬೂಟುಗಳನ್ನು ಬಿಚ್ಚಿಕೊಂಡನು ಕೋಟನ್ನು ಕಳೆದು ಮೇಜಿನ ಮೇಲೆ ಚಲ್ಲಿಕೊಟ್ಟನು. ಚಣ್ಣವನ್ನು ತೆಗೆದು ಕುರ್ಚಿಯಮೇಲೆ ಬೀಳುವಂತೆ ಬಿಸಾಟಿದನು; ಆದರೆ ಅದು ಕುರ್ಚಿಯ ಮೇಲೆ ಬೀಳದೆ, ನೆಲದ ಮೇಲೆ ಬಿದ್ದು ಹೊರಳಾಡಹತ್ತಿತು. ಕಾಲರ-ನೆಕ್ಟಾಯಿಗಳನ್ನು ತೆಗೆದು ಮೇಜಿನಮೇಲೆ ಒಗೆದು, ಬಳಿಕ ಕುರ್ಚಿಯಮೇಲೆ ಕುಳಿತುಕೊಂಡನು ಅತ್ತಿತ್ತ ನೋಡಿದನು ಅವನ ದೃಷ್ಟಿಯು ಹತ್ತಿರದ ಮೇಜಿನ ಮೇಲಿದ್ದ ಸಣ್ಣ ಪುಸ್ತಕದ ಕಡೆಗೆ ಹರಿಯಿತು ರಂಗರಾಯನು ಕುತೂಹಲತೆಯಿಂದ ಅದನ್ನು ಕೈಯಲ್ಲಿ ತಕ್ಕೊಂಡು ನೋಡಿದನು. ಮೇಲೆ "ಸಂಸಾರದ ಜಮಾಖರ್ಚಿನ ವಹಿ" ಎಂದು ಬರೆದಿತ್ತು. ಸ್ಪಷ್ಟವಾದ ಬರಹ. ಸುಂದರವಾದ ಅಕ್ಷರಗಳು. ರಂಗ ರಾಯನ ಕುತೂಹಲತೆಯು ಬೆಳೆಯುತ್ತ ಹೋಯಿತು. ಮೇಲಿನ ಪಾನನ್ನು ತೆಗೆದು ನೋಡಿದನು. ನಿಜವಾಗಿಯೂ ಅದು ತನ್ನ ಸಂಸಾರದ ಜಮಾಖರ್ಚಿನಪುಸ್ತ ಕವಾಗಿತ್ತು. ಜಮೆಯ ಹಾಗು ಖರ್ಚಿನ ರಕಮುಗಳೂ ಇವುಗಳ ವಿವರಣೆಗಳೂ ಸ್ಪಷ್ಟವಾಗಿ ಬರೆಯಲ್ಪಟ್ಟಿದ್ದವು. ರಂಗರಾಯನು ಇದನ್ನು ಓದಿಕೊಳ್ಳುತ್ತಿರ ವಾಗ ತರುಣಿಯೊಬ್ಬಳು ಆ ಕೋಣೆಯಲ್ಲಿ ಕಾಲಿಟ್ಟಳು. ರಂಗರಾಯನು ತೀ ಅಲ್ಪಕಾಲದವುಟ್ಟಿಗೆ ಮಾತ್ರ ದೃಷ್ಟಿಯನ್ನು ಹೊರಳಿಸಿ ಆ ಯುವತಿಯನ್ನು ನೋಡಿಕೊಂಡನು; ಮತ್ತೆ ಪುಸ್ತಕದ ಮೇಲೆ ನೋಟವನ್ನಿರಿಸಿದನು.

ಆಗಂತುಕ ರಮಣಿಯು ಹತ್ತಿರ ಬಂದು ರಂಗರಾಯರಿಗೆ ಸಾಷ್ಟಾಂ ನಮಸ್ಕಾರ ಮಾಡಿ ಎದ್ದು ನಿಂತಳು. ಆದರೂ ರಂಗರಾಯನು ನೋಟವನ್ನು ಹೊರಳಿಸಲಿಲ್ಲ. ಆಗಂತುಕ ರಮಣಿಯು "ಇಂದು ನಿಮ್ಮ ಊಟವಾಗಿರಲಿಕ್ಕಿಲ್ಲ ಹೊಟ್ಟೆ ಹಸಿದಿರಬಹುದು. ಉಪಹಾರ ಮಾಡುವಿರೋ? ಇಲ್ಲವೆ ಇನ್ನು ತು ಹೊತ್ತಿನಮೇಲೆ ಊಟಮಾಡುವಿರೊ? ಈಗ ಚಹಾ ತಕ್ಕೊಂಡರೆ, ರಾತ್ರಿಯ ಊಟವು ನೆಟ್ಟಗಾಗುವದಿಲ್ಲ." ಎಂದು ಹೇಳಿದಳು.

"ನಾನು ಊಟಮಾಡುವದಿಲ್ಲ."

"ಊಟವು ಬೇಡಾಗಿದ್ದರೆ ಬಿಡಿರಿ. ಏಳಿರಿ. ಕೈಕಾಲು ತೊಳೆದುಕೊಳ್ಳಿ ಉಪಹಾರದ ಸಾಮಾನುಗಳು ಸಿದ್ಧವಾಗಿವೆ. ನೀವು ಅವುಗಳನ್ನು ತಿನ್ನುವಷ್ಟ ರಲ್ಲಿಯೇ ನಾನು ಸರಬತ್ತನ್ನು ತಯಾರಿಸಿ ತಂದು ಕೊಡುವೆನು; ನಡೆಯಿರಿ."

"ಈಗ ನನಗೆ ಏನೂ ಬೇಡ." ರಂಗರಾಯನು ಹೇಳಿದನು.

"ಹೀಗೇಕೆ ಮಾಡುವಿರಿ? ನಾನು ಪರಕೀಯಳಲ್ಲ ನಾನು ನಿಮ್ಮ ಹೆಂಡತಿಯಾದ ಭಾಮಿನಿಯು ನನ್ನ ಕಡೆಗೆ ಕಣ್ಣೆತ್ತಿ ನೋಡಿದರೆ, ಜನರು ನಿಮಗೆ ಛೀ ಥೂ ಅನ್ನುವಂತಿಲ್ಲ!" ಆ ರಮಣಿಯು ನುಡಿದಳು.

"ನೀನು ನನ್ನ ಹೆಂಡತಿಯಲ್ಲವೆಂದು ಅಂದವರಾರು? ನಾನೇನು ನಿನಗೆ ಹುಲಿ, ಕರಡಿ ಎಂದು ಸಂಬೋಧಿಸಿದೆನೆ?" ರಂಗರಾಯನು ಕೇಳಿದನು.

"ಸಂಬೋಧಿಸದಿದ್ದರೇನಾಯಿತು? ನಿಮ್ಮ ವೃತ್ತಿಯನ್ನು ನೋಡುತ್ತಿರಲು, ನೀವು ಹುಲಿ ಕರಡಿಗಳನ್ನು ನೋಡಲಿಕ್ಕೆ ಭಯಗೊಳ್ಳುವಂತೆ ನನ್ನನ್ನು ನೋಡ ಲಿಕ್ಕೂ ಭಯಗೊಂಡಿರುವಿರೆಂಬಂತೆ ತೋರುತ್ತಿದೆ! ಇಲ್ಲವಾದರೆ, ಮನೆಬಿಟ್ಟು ಹೋಗಿ ಹಾಗೆ ಓಡಾಡುತ್ತಿದ್ದಿರಾ?" ಭಾಮಿನಿಯು ಕೇಳಿದಳು.

"ಬೆದರಿಕೆಯಿಂದ ಮನೆಬಿಟ್ಟು ಹೋದೆನೆಂದು ನಿನಗೆ ಹೇಳಿದವರಾರು? ಒಂದು ಕೆಲಸದ ಮೂಲಕ ಮುಂಬಯಿಗೆ ಹೋಗಬೇಕಾಗಿತ್ತು. ಹೋಗಿದ್ದೆನು. ಅದಿರಲಿ ನೀನು ಸುಭದ್ರೆಯ ಸಂಗಡ ಜಗಳಾಡಿದೆಯೇಕೆ?" ರಂಗರಾಯನು ಕೇಳಿದನು.

"ಇದು ನಿಮ್ಮಲ್ಲಿಯೇ ತಯಾರಾದ ಮಾತು. ಅವಳೆಂದೂ ಹೀಗೆ ಬರೆ ದಿರುವ ಸಂಭವವಿಲ್ಲ!"

"ನೀನು ಶಾಮೀರನನ್ನು ಮನೆಬಿಡಿಸಿ ಹೊರಗೆ ಹಾಕಿದೆಯೇಕೆ?"

"ಹೀಗೆ ನಿಮಗೆ ಯಾರು ಹೇಳಿದರು? ನೀವು ಅವನಿಗೆ ಒಂದು ವರುಷ ದಿಂದಲೂ ಪಗಾರ ಕೊಟ್ಟಿದ್ದಿಲ್ಲವಂತೆ. ಅವನು ತನ್ನ ಊರಿಗೆ ಹೋಗಬೇಕೆಂದು ಚಡಪಡಿಸುತ್ತಿದ್ದನು. ನಾನು ಅವನಿಗೆ ಕೊಡತಕ್ಕದ್ದೆಲ್ಲವನ್ನು ಕೊಟ್ಟು ಕಳು ಹಿರುವೆನು."

ರಂಗರಾಯನು ವಿಸ್ಮಿತನಾಗಿ ಕೇಳಿದನು:—"ಎಲ್ಲವನ್ನೂ ಕೊಟ್ಟೆಯಾ? ಹಾಗಾದರೆ ಇನ್ನು ಅವನು ಇಲ್ಲಿಗೆ ಬರುವದಿಲ್ಲ. ಬಚಿಮನು ಎಲ್ಲಿಗೆ ಹೋದನು?"

"ಸೇವಕರಿಗೆ ಸಕಾಲಕ್ಕೆ ಸಂಬಳವನ್ನು ಸಲ್ಲಿಸದೆ, ಅವರಿಂದ ಒತ್ತಾಯ ದಿಂದ ಕೆಲಸ ಮಾಡಿಸಿಕೊಳ್ಳುವದು ನ್ಯಾಯವಲ್ಲ! ಅವರಿಗೂ ನಿಮ್ಮಂತೆಯೆ ಮನೆ-ಹೆಂಡತಿ-ಮಕ್ಕಳು ಇರುವ ಸಂಭವವಿದೆ. ಬಚಿಮನು ಹೆಂಡತಿ ಮಕ್ಕ ಳನ್ನು ನೋಡಿಬರಲಿಕ್ಕೆಂದು ಸ್ವಗ್ರಾಮಕ್ಕೆ ಹೋಗಿದ್ದಾನೆ."

"ಒಳಿತು ಮಾಡಿರುವೆ! ಇನ್ನು ಈ ಮನೆಯನ್ನು ವಸಿಸ್ಯವುನಿಯ ಅಶ್ರ

ಮದಲ್ಲಿ ರೂಪಾಂತರಗೊಳಿಸಿಬಿಡು!" ರಂಗರಾಯನು ಜಮಾಖರ್ಚಿನ ವಹಿಯನ್ನು ನೋಡುತ್ತ ಮಾತಾಡುತ್ತಿದ್ದನು. ಅಕಸ್ಮಾತ್ತಾಗಿ ಜಮಾಖರ್ಚಿನ ಪುಸ್ತಕದಲ್ಲಿಯ ಒಂದು ದೊಡ್ಡ ಅಂಕಿಯ ಕಡೆಗೆ ಅವನ ದೃಷ್ಟಿಯು ಹರಿಯಿತು. ಅವನು ಚಮಕಿತನಾಗಿ "ಇದೇನು? ಆರುನೂರಾಆರು ರೂಪಾಯಿ............" ಎಂದು ಕೇಳಿದನು.

"ಅದು ಕಿರಾಣಿ ಅಂಗಡಿಕಾರನ ಬಾಕಿಯು. ಇನ್ನೂ ಇನ್ನೂರು ರೂಪಾಯಿಗಳನ್ನು ಕೊಡಬೇಕಾಗಿದೆ. ಮುಂದಿನ ತಿಂಗಳಲ್ಲಿ ಕೊಡುವೆನೆಂದು ಹೇಳಿ ಕಳುಹಿದ್ದೇನೆ."

ರಂಗರಾಯನು ವಿಸ್ಮಯದಿಂದ ನುಡಿದನು:-"ಕಿರಾಣಿ ಅಂಗಡಿಯ ಬಾಕಿ ಆರುನೂರು ರೂಪಾಯಿಗಳೇ!"

ಭಾಮಿನಿಯು ನಗುತ್ತ ಹೇಳಹತ್ತಿದಳು:—"ಆಗದೇನು ಮಾಡೀತು? ಮೇಲಿಂದ ಮೇಲೆ ಬಾಕಿಯನ್ನು ತೀರಿಸುವಂತಿಲ್ಲ. ಜಮಾಖರ್ಚಿನ ಪುಸ್ತಕವನ್ನು ನೋಡುವಂತಿಲ್ಲ ಹೀಗೆ ನೀವು ಎರಡು ವರುಷ ದುರ್ಲಕ್ಷ್ಯ ಮಾಡಿದ್ದರಿಂದ ಬಾಕಿಯು ಬೆಳೆದು ದೊಡ್ಡದಾಗಿದೆ."

"ನೀನು ಅಂಗಡಿಕಾರನ ಬಾಕಿಯ ಪಟ್ಟಿಯನ್ನು ನೋಡಿದೆಯಾ?" ರಂಗರಾಯನು ಮುಖವೆತ್ತಿ ಕೇಳಿದನು.

"ನೋಡದೆ, ರೂಪಾಯಿಗಳನ್ನೇಕೆ ಕೊಡಲಿ?"

ರಂಗರಾಯನು ಪ್ರತಿಮಾತಾಡಲಿಲ್ಲ. ತಾನಿದುವರೆಗೆ ಸಂಸಾರದ ವೆಚ್ಚದ ವಿಷಯದಲ್ಲಿ ಅನಾಸ್ಥೆಯಿಂದಿದ್ದುದು ಅನುಚಿತವಾಯಿತೆಂದು ಅವನಿಗೆ ಹೊಳೆಯಿತು. ಭಾಮಿನಿಗೆ ಪತಿಯ ಈ ಮನಸ್ಥಿತಿಯು ಹೊಳೆಯಿತು. ಇವಳು:—"ಸುಮ್ಮನಾದಿರಲ್ಲ; ಯಾವ ವಿಚಾರ ಮಾಡುತ್ತಿರುವಿರಿ?" ಎಂದು ಕೇಳಿದಳು.

ರಂಗರಾಯನು ಕೊಂಚ ನಗುವನ್ನು ತಂದುಕೊಂಡು ಹೇಳಹತ್ತಿದನು: "ನಾನು ಪಗಾರವನ್ನು ತಕ್ಕೊಂಡು ಹದಿನೈದು ದಿನಗಳಾದವು. ಇನ್ನು ಹದಿನೈದು ದಿನಗಳ ವರೆಗೆ ಪಗಾರದ ರೂಪಾಯಿಗಳು ಕೈಸೇರುವಂತಿಲ್ಲ. ನೀನಾದರೊ ಪಗಾರದ ಎಲ್ಲ ರೂಪಾಯಿಗಳನ್ನು ಹೀಗೆ ವೆಚ್ಚ ಮಾಡಿಬಿಟ್ಟಿರುವೆ. ಇನ್ನು ರೂಪಾಯಿಗಳು ಬೇಕಾದರೆ ಹೇಗೆ ಮಾಡಬೇಕೆಂಬ ಚಿಂತೆಯು ನನ್ನನ್ನು ಬಾಧಿಸಹತ್ತಿದೆ."

ಭಾಮಿನಿಯು ತಲೆಯಲ್ಲಾಡಿಸಿ ನುಡಿಯತೊಡಗಿದಳು:—"ನೀವು ಈ ವಿಷಯದಲ್ಲಿ ಕೊಂಚವೂ ಚಿಂತಿಸುವ ಕಾರಣವಿಲ್ಲ. ನಾನೇನು ಸಣ್ಣ ಹುಡು

ಗೆಯೇ? ಮುಂದಿನ ಆಲೋಚನೆಯಿಲ್ಲದೆ ವೆಚ್ಚ ಮಾಡತಕ್ಕವಳು ನಾನಲ್ಲ. ಇನ್ನು ಹದಿನೈದೇ ದಿನಗಳೇಕೆ, ಒಂದು ತಿಂಗಳ ವರೆಗೆ ನೀವು ರೂಪಾಯಿಗಳನ್ನು ತಂದು ಕೊಡದಿದ್ದರೂ ನಾನು ಬಾಳುವೆಯನ್ನು ಸುಸೂತ್ರವಾಗಿ ಸಾಗಿಸಬಲ್ಲೆನು; ಆದರೆ ಈ ವರೆಗೆ ನೀವು ನಡಿಸಿರುವ ಈ ಕೊಡುಕೊಳ್ಳುವ ವ್ಯವಹಾರವು ಸರಿಯಾದು ದಲ್ಲ! ನಿಮ್ಮ ದುರ್ಲಕ್ಷ್ಯದಿಂದ ಜನರಿಗೆ ಕೊಡಬೇಕಾದ ಹಣವು ಮಿತಿಮೀರಿ ಹೋಗಿದೆ. ಗೌಳಿಗನು ತನಗೆ ನೂರೈವತ್ತು ರೂಪಾಯಿಗಳು ದೊರೆಯಬೇಕೆಂದು ಹೇಳಿದನು. ಅಗಸನು ತನಗೆ ಐವತ್ತು ರೂಪಾಯಿ ಬರತಕ್ಕದ್ದಿದೆಯೆಂದನು. ಇವರಂತೆಯೇ ಇನ್ನೂ ಹಲವರು ಬೇಡತಕ್ಕವರಿದ್ದಾರೆ. ನಾನು ಇವರೆಲ್ಲರ ಬಾಕಿಯನ್ನು ಮುಂದಿನ ತಿಂಗಳಲ್ಲಿ ತೀರಿಸುವ ಸಂಕಲ್ಪ ಮಾಡಿಕೊಂಡಿದ್ದೇನೆ."

"ಅವರೇನು? ಮನಬಂದಂತೆ ಕೇಳುವರು! ಅವರು ಕೇಳಿದಂತೆ ರೂಪಾಯಿ ಕೊಡಲಿಕ್ಕಾದೀತೆ?" ರಂಗರಾಯನು ಭಯಗೊಂಡವನಾಗಿ ಕೇಳಿದನು.

"ಒಮ್ಮೆಲೆ ಕೊಡುವದು ಸಾಧ್ಯವಲ್ಲವೆಂಬದನ್ನು ನಾನೂ ಬಲ್ಲೆನು. ನಾನು ಈ ಬಾಕಿಯ ಹಣವನ್ನು ಕ್ರಮವಾಗಿ ಕಡಿಮೆ ಮಾಡುತ್ತ ನಡೆದು, ನಾಲ್ಕಾರು ತಿಂಗಳುಗಳಲ್ಲಿ ತೀರಿಸಬೇಕೆಂದಿರುವೆನು. ನೀವು ಮತ್ತೆಲ್ಲಿಯೂ ಸಾಲ ಮಾಡಿಲ್ಲವಷ್ಟೇ? ಮರೆಮಾಜದೆ ಹೇಳಿರಿ. ಯಾವ ಸಂಗತಿಯನ್ನೂ ಮುಚ್ಚಿಟ್ಟುಕೊಳ್ಳಬೇಡಿರಿ."

ರಂಗರಾಯನು ಹೆಂಡತಿಯ ಮೋರೆಯ ಮೇಲೆ ದೃಷ್ಟಿಯಿರಿಸಿ ಹೇಳ ಹತ್ತಿದನು:—"ಹೋದ ವರುಷದ ಬೇಸಿಗೆಯ ಸೂಟಿಯಲ್ಲಿ ಮಹಾಬಳೇಶ್ವರಕ್ಕೆ ಹೋಗಿದ್ದೆನು. ಸಾವಿರ ರೂಪಾಯಿಗಳು ವೆಚ್ಚವಾದವು. ಈ ಹಣವನ್ನು ಪ್ರಾಮಿಸರಿ ನೋಟ ಬರಕೊಟ್ಟು ಸಾಲವಾಗಿ ತಕ್ಕೊಂಡಿದ್ದೆನು. ಇದು ವರೆಗೆ ತೀರಿಸಲಿಕ್ಕಾಗಿಲ್ಲ."

ಭಾಮಿನಿಯು ಗಲ್ಲದ ಮೇಲೆ ಬೆರಳನ್ನಿಟ್ಟುಕೊಂಡು:-'ಅಪ್ಪಯ್ಯಾ, ಎಂಥ ಸಾಲಗುಳಿಕರು ನೀವು!' ಎಂದು ನುಡಿದಳು. ಕೆಲಹೊತ್ತು ಹಾಗೆಯೇ ನಿಂತಿದ್ದು ಮತ್ತೆ ಮೋರೆಯ ಮೇಲೆ ನಗುವನ್ನು ತಂದುಕೊಂಡು ಹೇಳಹತ್ತಿದಳು:— 'ನಿಮ್ಮ ಈ ಎಲ್ಲ ಸಾಲವನ್ನು ತೀರಿಸಲಿಕ್ಕೆ ನನಗೆ ಕನಿಷ್ಠ ಪಕ್ಷಕ್ಕೆ ಒಂದು ವರ್ಷದ ಅವಧಿಯು ಬೇಕು. ಮತ್ತೆಲ್ಲಿಯೂ ಸಾಲ ಮಾಡಿಲ್ಲವಷ್ಟೇ?'

"ಇಲ್ಲ, ಚಿಲ್ಲರ ಕೊಡಕೊಳ್ಳುವದು ಕೊಂಚ ಇದ್ದರೂ ಇರಬಹುದು; ಆದರೆ ಪ್ರಿಯೆ, ಈ ಜನ್ಮದಲ್ಲಿ ಋಣಮುಕ್ತನಾಗಬೇಕೆಂದು ನಾನೆಂದೂ ಆಶಿಸ

ಹೇಳಲಿಯಾ?'' ಪರಿಚಾರಿಕೆ ಕೇಳಿದಳು.

"ತಿಗೆದಿಡುವುದೇ ಯೋಗ್ಯವಾದದ್ದು. ಅಡಿಗೆಯ ಆಚಾರಿಯು ಅ
ಇಲ್ಲವಾಗಿ ತೋರುತ್ತಿದೆ. ಅಂತೆಯೇ ಹೀಗೆ ವೆಳೆಯು ಗೊಂದಲವಾಗಿದೆ,'
ರಂಗರಾಯನೆಂದನು. ಪರಿಚಾರಿಕೆಯು ಬೇರೆ ಮಾತಾಡದೆ ಹೊರಟಳು. ಕು
ಹೊತ್ತಿನಮೇಲೆ ರಂಗರಾಯನು ಅವಳನ್ನು ಕೂಗಿ:—"ಬಡಿಸಿದ್ದನ್ನು ಎತ್ತಿ ತೆ
ದಿರಿಸುವುದು ತ್ರಾಸದಾಯಕವು. ನಾನು ಬರುವೆನೆಂದು ಹೇಳು,'' ಎಂದ
ಹೇಳಿದನು.

ರಂಗರಾಯನು ಬಚ್ಚಲಮನೆಗೆ ಹೋದನು. ಆಚಾರಿಯು ಕಾಯ್
ನೀರಿನ ಚೆಂಬುವನ್ನೂ ಪಂಜೆಯನ್ನೂ ಹಿಡಕೊಂಡು ನಿಂತಿದ್ದನು. ರಂಗರಾ
ಯನು ಕೈಕಾಲ ತೊಳೆದುಕೊಂಡು ಒರಸಿಕೊಂಡು ಅಡುಗೆಯ ಮನೆಯನ್ನು
ಹೊಕ್ಕನು. ಭೋಜನಶಾಲೆಯು ಬಹು ಸ್ವಚ್ಛವಾಗಿತ್ತು. ಏನದ ಅವ್ಯವ
ಯಾರಲಿಲ್ಲ. ಸಾಮಾನುಗಳು ಅಲ್ಲಲ್ಲಿ ವ್ಯವಸ್ಥೆಯಿಂದ ಇರಿಸಲ್ಪಟ್ಟಿದ್ದುವು
ಒಂದೆಡೆಯಲ್ಲಿ ಮಣೆಯು ಇತ್ತು. ಇದರಮುಂದೆ ಬೆಳ್ಳಿಯ ದೊಡ್ಡ ತಾ
ಲ್ಲಿ ಅಡುಗೆಯ ಪದಾರ್ಥಗಳು ಅಚ್ಚುಕಟ್ಟತನದಿಂದ ಬಡಿಸಲ್ಪಟ್ಟಿದ್ದವು
ಮಣೆಯ ಒಂದು ಬದಿಯಲ್ಲಿ ಲಕ ಲಕ ಹೊಳೆಯುವ ತಂಬಿಗೆ-ಥಾಲಿಗಳಿದ್ದವು
ತಾಟಿನ ಪಕ್ಕದಲ್ಲಿ ಬೆಳ್ಳಿಯ ಬಟ್ಟಲುಗಳಿದ್ದವು. ಕೊಂಚ ದೂರದಲ್ಲಿ ಭಾಮಿ
ನಿಯು ನೆಲದಮೇಲೆ ಕುಳಿತಿದ್ದಳು. ಹತ್ತಿರ ರಾಮನಿದ್ದನು.

ರಂಗರಾಯನು ಮಣೆಯಮೇಲೆ ಕುಳಿತು ಇಂತೆಂದನು:-"ನೀನು ನನ್ನೊ
ಡನೆ ಊಟಮಾಡೆಯೆಂಬುದು ನನಗೆ ಗೊತ್ತುಂಟು; ಆದರೆ ರಾಮನೂ ನನ್ನ
ಸಂಗಡ ಉಣ್ಣಲಾಗದೇನು?''

ಇದರ ಉತ್ತರವನ್ನು ರಾಮನೇ ಕೊಟ್ಟನು:—'ಅಪ್ಪಾ, ಈಗ ನಾನೊಲ್ಲೆ
ನಾನು ದಿನಾಲು ಅವ್ವನ ಸಂಗಡ ಊಟಮಾಡುತ್ತೇನೆ.'

ರಂಗರಾಯನು ಬಡಿಸಿದ್ದ ವಿಪುಲ ಪದಾರ್ಥಗಳನ್ನು ನೋಡಿ ಇಂತ
ವಿಚಾರಿಸಿದನು:—"ಇಷ್ಟೆಲ್ಲ ಪದಾರ್ಥಗಳನ್ನು ಅಟ್ಟವರಾರು? ಬಹುತರ ನೀನೆ
ಅಡುಗೆಯ ಮಾಡಿರುವಂತೆ ತೋರುತ್ತಿದೆ''

"ಅಹುದು''

"ಅಡುಗೆಯುವನು ಎಲ್ಲಿ ಹೋದನು? ಅವನನ್ನು ಮನೆಬಿಡಿಸಿ ಹೊರ
ಟಿಸಿಬಿಟ್ಟೆಯೇನು? ನಾನು ಅವನ ಪಗಾರವನ್ನು ಹಿಡಿದಿಟ್ಟುಕೊಂಡವನಲ್ಲ

ಅವನ ಪಗಾರವೇನೂ ನನ್ನ ಬಳಿಯಲ್ಲಿ ಶಿಲ್ಕಿರಲಿಲ್ಲ. ನೀನು ಒಂದು ವರ್ಷದ ಪಗಾರವನ್ನು ಮುಂಗಡಕೊಟ್ಟು ಅವನನ್ನು ಹೊರದೂಡಿರಬಹುದು!" ರಂಗರಾಯನು ವಿನೋದ ಮಾಡಿದನು.

ಭಾಮಿನಿಯು ಮೋರೆಯ ಮೇಲಿನ ನಗುವನ್ನು ತೋರ್ಪಡಿಸದೆ:—"ಒಮ್ಮೊಮ್ಮೆ ಪ್ರಸಂಗವಿಶೇಷದಲ್ಲಿ ಚಾಕರರಿಗೆ ಮುಂಗಡ ಪಗಾರ ಕೊಡುವದೂ ಅಗತ್ಯವಾಗುವದು. ಅವರ ಪಗಾರದ ಹಣವನ್ನು ತಡೆದಿಟ್ಟುಕೊಳ್ಳುವದೇ ಸದಾ ಸಯುಕ್ತಿಕವೆಂದು ಹೇಳಲಿಕ್ಕಾದೀತೆ? ಇದು ಏನೇ ಇರಲಿ, ಅಡುಗೆಯ ಆಚಾರಿಯು ಮನೆಬಿಟ್ಟು ಹೋಗಿಲ್ಲ. ಕೈಕಾಲು ತೊಳಕೊಳ್ಳಲಿಕ್ಕೆ ನೀರ ಕೊಟ್ಟವನನ್ನು ನೀವು ಚನ್ನಾಗಿ ನೋಡಲಿಲ್ಲವೇನು? ಈಗ ಮತ್ತೊಮ್ಮೆ ಅವನ ಮೋರೆಯ ನೋಡುವ ಮನಸ್ಸಾಗಿದೆಯೆ? ಕರೆಯಲೇನು?" ಎಂದು ಕೇಳಿದಳು.

ರಂಗರಾಯನು ಅವಸರದಿಂದ ತಲೆಯಲ್ಲಾಡಿಸಿ:—"ಬೇಡ. ಅವನನ್ನು ಕರೆಯುವ ಕಾರಣವಿಲ್ಲ. ನಾನೀಗ ಅವನನ್ನು ನೋಡಲಿಕ್ಕೆ ವ್ಯಗ್ರನಾಗಿಲ್ಲ; ಆದರೆ ಆ ಪ್ರಾಣಿಯನ್ನು ಯಾವಾಗಲೂ ಅಡುಗೆಯ ಮನೆಯಿಂದ ದೂರಿಸುತ್ತ ಹೋಗಬೇಡ. ಆಗಾಗ್ಗೆ ಅವನೂ ಅಡಿಗೆಯ ಮಾಡುತ್ತಿರಲಿ. ಇಲ್ಲವಾದರೆ ಅವನು ಕಲಿತುದನ್ನೆಲ್ಲ ಮರೆತು ನಿರುಪಯುಕ್ತನಾದಾನು! ಅವನ ಹೊಟ್ಟೆಯ ಮೇಲೆ ಕಾಲಕೊಟ್ಟ ಪಾಪಕ್ಕೆ ನೀನು ಗುರಿಯಾದೀ!" ಎಂದು ನುಡಿದನು.

ರಂಗರಾಯನು ಊಟ ಮಾಡಲಾರಂಭಿಸಿದನು. ಒಂದೊಂದೇ ಸಾಮಾನಿನ ರುಚಿ ನೋಡಿ ಪರಮ ಸಂತುಷ್ಟನಾದನು. ಈ ಊಟದಿಂದ ರಂಗರಾಯನಿಗೆ ತನ್ನ ಜನನಿಯು ಜೀವಿಸಿರುವಾಗಳಿನ ದಿನಗಳ ಸ್ಮರಣೆಯಾಯಿತು. ಅವನು ಕೆಲಹೊತ್ತು ಮಾತಾಡದಿದ್ದು ಭೋಜನ ಮಾಡಿದನು. ಬಳಿಕ:—"ಅಡುಗೆಯು ಸರ್ವೋತ್ಕೃಷ್ಟವಾಗಿದೆ. ಹೀಗೆ ಅಡಿಗೆ ಮಾಡಲಿಕ್ಕೆ ನೀನೆಲ್ಲಿ ಕಲಿತುಕೊಂಡೆ?" ಎಂದು ಕೇಳಿದನು.

ಭಾಮಿನಿಗೆ ಪರಮಾನಂದವಾಯಿತು; ಆದರೂ ಇವಳು ಸಂತೋಷವನ್ನು ತೋರ್ಪಡಿಸದೆ:—"ನಿಮ್ಮ ಅಡುಗೆಯ ಆಚಾರಿಯೆ ಶ್ರೇಷ್ಠತಮಪಾಚಕನೆಂದು ನಿಮ್ಮ ಭಾವನೆಯಿತ್ತೇನು? ಇವನಿಗಿಂತಲೂ ಚೆನ್ನಾಗಿ ಅಡುಗೆ ಮಾಡುವದು ಯಾರಿಗೂ ಸಾಧ್ಯವಲ್ಲವೆಂದೇ ನಿಮ್ಮ ಅಭಿಪ್ರಾಯವಿತ್ತೇನು?" ಎಂದು ಕೇಳಿದಳು.

"ಹೀಗೇನೂ ನನ್ನ ಅಭಿಪ್ರಾಯವಿರಲಿಲ್ಲ. ನೀನು ಅಡುಗೆಯನ್ನು ಬಹು

ಚನ್ನಾಗಿ ಮಾಡಿದ್ದುದರಿಂದ ಹಾಗೆ ಕೇಳಿದೆನು. ಇರಲಿ. ಇದೇ ತರದ ಊಟವು ನನಗೆ ದಿನಾಲು ದೊರೆಯಬಹುದಷ್ಟೆ?"

"ಯಾಕೆ ದೊರೆಯಲಾಗದು? ಇದಕ್ಕೂ ಉತ್ತಮವಾದ ಅಡಿಗೆಯನ್ನು ಉಣ್ಣುತ್ತ ಹೋಗುವಿರಲ್ಲದೆ, ಹೀನವಾದ ಪದಾರ್ಥವನ್ನು ನಾನೆಂದಿಗೂ ನಿಮಗೆ ಉಣಬಡಿಸೆನು!"

"ಪಾಚಕ ಆಚಾರಿಯ ಅಡಿಗೆಯನ್ನು ನಾನಿಂದೇ ಮರೆಯಲು ಸಿದ್ಧನಾಗಿರುವೆನು. ಆದರೆ ನೀನು ಸಾಲವನ್ನು ತೀರಿಸುವ ಭರದಲ್ಲಿ..........."

ಭಾಮಿನಿಯು ಕೃತ್ರಿಮ ಕೋಪದಿಂದ ಇಂತೆಂದಳು:—"ಪತಿ-ಪುತ್ರರಿಗೆ ಹೊಟ್ಟೆ ತುಂಬ ಹಾಕದೆ, ಸಾಲ ತೀರಿಸಲಿಕ್ಕೆ ತೊಡಗುವೆನೆಂದು ನಾನು ನಿಮ್ಮ ಮುಂದೆ ಹೇಳಿರುವೆನೆ? ಎಂಥಹ ಮಾತಿದು! ನೀವಿನ್ನು ಆ ಸಾಲದ ಸುದ್ದಿಯನ್ನು ಕನಸಿನಲ್ಲಿ ಸಹ ಎತ್ತಬೇಡಿರಿ!"

"ಸಾಲದ ಸುದ್ದಿಯನ್ನು ಸ್ಮರಿಸಿಕೊಂಡು ಸವಿಯುವದು ನನ್ನ ಸ್ವಭಾವವೇ ಅಲ್ಲ ನೀನು ಮೇಲಿಂದ ಮೇಲೆ ನನಗೆ ಎಚ್ಚರಿಕೆ ಕೊಡುವ ಕಾರಣವಿಲ್ಲ. ನಾನು ಸಾಲದ ಸಂಗತಿಯನ್ನು ಮರೆದು ಸದಾ ನಿಶ್ಚಿಂತನಾಗಿರುವೆನು. ಆದರೆ..............."

"ಮತ್ತೆ ಕೊನೆಯಲ್ಲಿ ಆದರೆ.... ಯಾಕೆ? ನೀವು ಕೊಂಚವೂ ಸಂದೇಹಿಸಬೇಡಿರಿ. ಊಟಕ್ಕಾಗಿ ಆ ಸಾಲವಾದುದಲ್ಲ"

"ಪ್ರಿಯೆ, ಏತಕ್ಕಾಗಿ ಆ ಸಾಲವಾಯಿತೆಂಬುದು ನನಗೆ ಹೊಳೆಯದಾಗಿದೆ...............!"

"ಹೊಳೆಯದಿರುವದೇ ಒಳಿತಾದ್ದು. ಅದನ್ನು ತಿಳಿಯುವದರಿಂದ ನಿಮಗೆ ಪ್ರಯೋಜನವಿಲ್ಲ; ಆದರೆ ಈ ಪ್ರಸಂಗದಲ್ಲಿ ನಾನೊಂದು ಬೇಡಿಕೆಯ ಬೇಡಿಕೊಳ್ಳುವೆನು. ಅದಾವುದೆಂದರೆ:—"ಮೂರ್ಖಳೆಂದು ನಿರ್ಧರಿಸಿ, ಮತ್ತೆ ನನ್ನನ್ನು ಗಡಿಪಾರಿನ ಶಿಕ್ಷೆಗೆ ಗುರಿಮಾಡಬೇಡಿರಿ!"

ರಂಗರಾಯನು ಮತ್ತೆ ಮಾತಾಡದೆ, ಕೆಳಮೋರೆ ಮಾಡಿ ಉಣ್ಣಹತ್ತಿದನು. "ಅವ್ವಾ, ಏಳು. ಅಪ್ಪನ ಊಟವಾಗುತ್ತಲೆ, ನಾವು ಲಗು ಲಗು ಊಟ ಮಾಡೋಣ. ನೀನು ನಿನ್ನಿನ ಜಟಾಯುವಿನ ಕಥೆಯನ್ನು ಇಂದು ಮುಂದೆ ಸಾಗಿಸಿ ಮುಗಿಸಬೇಕಾಗಿದೆ. ಅವ್ವಾ, ಜಟಾಯುವಿನ ಮಗನು ಮುಂದೆ ಏನು ಮಾಡಿದನು?" ರಾಮನು ಕೇಳಿದನು.

ರಂಗರಾಯನು ಮುಖವೆತ್ತಿ ಇಂತೆಂದನು:—"ಜಟಾಯುವಿನ ಮಗನು ಏನೇ ಮಾಡಲೊಲ್ಲನೇಕೆ; ಈ ಹುಡುಗನು ಮಾತ್ರ ನಿನ್ನನ್ನು ಚನ್ನಾಗಿ ಅಂಟಿಕೊಂಡಿದ್ದಾನೆ" ಭಾಮಿನಿಯು ಮಾತಾಡಲಿಲ್ಲ ರಾಮನ ಮೈಮೇಲೆ ಕೈಯಾಡಿಸುತ್ತ ಸುಮ್ಮನಿದ್ದಳು.

"ಇದರ ಕಾರಣವೇನೆಂಬುದನ್ನು ನೀನು ಬಲ್ಲೆಯಾ?" ರಂಗರಾಯನು ಕೇಳಿದನು.

"ಕಾರಣವೇನಿರಬೇಕು? ಮಾತೆಯಿಲ್ಲದ ಮಗು. ಸಣ್ಣ ಹುಡುಗ. ಮನೆಯಲ್ಲಿ ಓರಿಗೆಯ ಬೇರೆ ಬಾಲಕರಿಲ್ಲ..........,'

"ಇರಬಹುದು; ಆದರೆ ಹಡೆದವಳಿರುವಾಗಲೂ ಇವನು ಇಷ್ಟು ಸಲುಗೆಯಿಂದ ಅವಳೊಡನೆ ವರ್ತಿಸಿದವನಲ್ಲ."

ಭಾಮಿನಿಯ ಮುಖವು ಲಜ್ಜೆಯಿಂದ ಆರಕ್ತವಾಯಿತು. ಇಂತೆಂದಳು: "ನೀವು ಏನಾದರೊಂದು ಮಾತಾಡಿ ಬಿಡುವಿರಿ!" ಕೊಂಚ ಹೊತ್ತು ಸುಮ್ಮನಿದ್ದು ಮತ್ತೆ ಹೇಳಹತ್ತಿದಳು:—"ಚನ್ನಾಗಿ ಊಟ ಮಾಡಿರಿ. ಮುಂಜಾವಿನಿಂದ ಇದು ವರೆಗೆ ಊಟ ಮಾಡಿದವರಲ್ಲ. ಅವಸರದಿಂದ ಊಟ ಮಾಡಿದರೆ ಹೊಟ್ಟೆ ತುಂಬುವದಿಲ್ಲ. ಆ ಚಪಾತಿಯನ್ನು ಚಲ್ಲಬೇಡಿರಿ. ನನ್ನಾಣೆಯಿದೆ. ನೀವದನ್ನು ತಿನ್ನಲೆ ಬೇಕು. ಇನ್ನಿಷ್ಟು ಅನ್ನವನ್ನು ತಂದುಹಾಕುವೆನು...."

ರಂಗರಾಯನು ಚಮಕಿತನಾಗಿ ಭಾಮಿನಿಯ ಮುಖದ ಕಡೆಗೆ ನೋಡಹತ್ತಿದನು. ಹೆಚ್ಚು ಊಟ ಮಾಡುವುದಕ್ಕಾಗಿ ಪೀಡಿಸೋಣ, ಹೊಟ್ಟೆತುಂಬ ಊಟ ಮಾಡಲಿಯೆಂದು ಮನಃಪೂರ್ವಕ ಆಗ್ರಹ ಮಾಡೋಣ, ಆಣೆಯನ್ನಿಟ್ಟುಕೊಳ್ಳೋಣ ಮೊದಲಾದ ಸಂಗತಿಗಳು ರಂಗರಾಯನಿಗೆ ಬಹುದಿನಗಳಿಂದ ಅಪರಿಚಿತಗಳಾಗಿದ್ದವು ಇಂದು ಪುನಃ ಆ ಮುನ್ನಿನ ಸಂಗತಿಯು ಬಾಲ್ಯಕಾಲದಲ್ಲಿ ಕೇಳಿದ್ದ ಪದದ ಪಲ್ಲವಿಯಂತೆ ಸ್ಮರಣೆಯಲ್ಲಿ ಬರಹತ್ತಿತು. ರಂಗರಾಯನು ತನ್ನ ಮಾತೆಯ ಏಕಮಾತ್ರ ಪುತ್ರನಾಗಿದ್ದನು. ಆ ಮಮತೆಯ ಮಾತೆಯು ಮಗನ ಊಟಕ್ಕೋಸುಗ ಎಷ್ಟು ಕಾಳಜಿ ತಕ್ಕೊಳ್ಳುತ್ತಿದ್ದಳು! ಎಷ್ಟು ಆಗ್ರಹವನ್ನು ತೋರುತ್ತಿದ್ದಳು! ರಂಗರಾಯನು ಮಾತೆಯ ವಿರಹದ ಈ ದೀರ್ಘಕಾಲದಲ್ಲಿ ಆ ಮೊದಲಿನ ಸಂಗತಿಯನ್ನು ಮರೆದಿದ್ದನು. ಇಂದಿನ ಭಾಮಿನಿಯ ವ್ಯವಹಾರದಿಂದ ರಂಗರಾಯನಿಗೆ ಬಹು ದಿನಗಳ ಹಿಂದಿನ ಆ ಸಂಗತಿಯು ನೆನಪಾಗಹತ್ತಿತು. ಅವನು ಭಾಮಿನಿಯ ಆಗ್ರಹವನ್ನು ಮೀರದಾದನು. ಅವಳ ಹೇಳಿ

ಕೆಯಂತೆ ಎಲ್ಲವನ್ನೂ ಊಟಮಾಡಿದನು. "ಪ್ರಿಯೆ, ನಾನಿನ್ನು ಸಂಸಾರದ ಯಾವ ಸಂಗತಿಯನ್ನೂ ಲಕ್ಷಿಸುವುದಿಲ್ಲ. ಎಲ್ಲ ಭಾರವನ್ನೂ ನಿನ್ನ ಮೇಲೆ ಹೇರಿ ನಿಶ್ಚಿಂತನಾಗುವೆನು"ಎಂದು ಹೇಳಿ ಎದ್ದು ಹೋದನು.

---

# ೭

ಎರಡು ವಾರಗಳು ಸದ್ದಿಲ್ಲದೆ ಕ್ರಮಿಸಿದುವು ಈ ದೀರ್ಘಸಮಯವು ಇಷ್ಟು ಬೇಗನೆ ಹೇಗೆ ಗತಿಸಿತೆಂಬುದನ್ನು ರಂಗರಾಯನು ಊಹಿಸದಾದನು. ಇಂದು ರವಿವಾರ. ರಂಗರಾಯನು ಮುಂಜಾವಿನಲ್ಲಿ ಚಹಾ ಪಾನ ಮಾಡುತ್ತ ಕುಳಿತಿದ್ದನು. ಭಾಮಿನಿಯು ಬಂದು ಮಾತಾಡಹತ್ತಿದಳು:—"ಒಮ್ಮೆ ಸುಭದ್ರೆಯ ಮನೆಗೆ ಹೋಗಿ, ಅವಳನ್ನು ಮಾತಾಡಿಸಿ ಬನ್ನಿರೆಂದು ನಾನು ನಿಮಗೆ ದಿನಾಲು ಹೇಳುತ್ತಿರುವೆನು. ನೀವು ನನ್ನ ಮಾತನ್ನು ಕೇಳದವರಾಗಿರುವಿರಿ. ಇಂದು ನೀವು ಅವಳ ಮನೆಗೆ ಹೋಗಲೇ ಬೇಕು. ಇಲ್ಲವಾದರೆ ಅವಳು ಏನೆಂದು ಭಾವಿಸಬಹುದೆಂಬುದನ್ನು ನೀವೇ ವಿಚಾರಿಸಿ ನೋಡಿರಿ. ಇನ್ನು ಕೆಲವು ದಿವಸ ನೀವು ಅವಳ ಮನೆಗೆ ಹೋಗದಿದ್ದರೆ, ಅವಳು ನಿಜವಾಗಿಯೂ ನನ್ನೊಡನೆ ಜಗಳ ವಾಡದೆ ಬಿಡಳು."

ರಂಗರಾಯನು ಮನಸ್ಸಿನಲ್ಲಿ ನಾಚಿಕೊಂಡವನಾಗಿ ಹೇಳಿದನು:—'ಏನು ಮಾಡಲಿ? ಈಗ ಕಾಲೇಜದಲ್ಲಿ ಕೆಲಸವು ಬಹಳವಾಗಿದೆ. ಸುಭದ್ರೆಯ ಮನೆಗೆ ಹೋಗಲಿಕ್ಕೆ ಅವಕಾಶವೇ ಇಲ್ಲದಾಗಿದೆ............!"

"ನಿಮ್ಮ ಕೆಲಸವು ಒಳಿದುದು ನನಗೆ ಗೊತ್ತುಂಟು! ಆದರೆ ಕಾಲೇಜು ಬಿಟ್ಟ ಬಳಿಕ, ತಿರುಗಿ ಮನೆಗೆ ಹೊರಟಾಗ ಒಮ್ಮೆ ಅವಳ ಮನೆಗೆ ಹೋಗಿ ಬರ ಲಿಕ್ಕೆ ಅಡ್ಡಿಯೇನು? ಇದೇನು ಅಂಥ ಜಡವಾದ ಹೋರೆಯೇ? '

"ನಿನಗೆ ಅಧ್ಯಾಪನ ಕಾರ್ಯವನ್ನು ಮಾಡಿದ ಅನುಭವವಿಲ್ಲ. ಅಂತೆಯೆ ಹೀಗೆ ಮಾತಾಡುತ್ತಿರುವೆ! ಶಿಕ್ಷಣದ ಕೆಲಸವು ಎಷ್ಟು ತ್ರಾಸದಾಯಕವೆಂಬು ದನ್ನು ನೀನೇನು ಬಲ್ಲೆ? ಕಾಲೇಜದ ವೇಳೆಯನ್ನು ಕಳೆಯುಬೇಕಾದರೆ ನನಗೆ ಸಾಕು ಸಾಕಾಗಿ ಹೋಗುತ್ತಿದೆ! ಹೀಗೆ ಬೇಜಾರಗೊಂಡ ನನಗೆ ಅತ್ತಿತ್ತ ಅಲೆಯುವುದಕ್ಕೆ ಹುರುಪು ಹೇಗಾಗಬೇಕು? ಕಾರಣ ಬೇರೆ ಕಡೆಗೆ ಹೋಗದೆ ನೆಟ್ಟಗೆ ಮನೆಗೆ ಬಂದು ಬಿಡುವೆನು."

ಭಾಮಿನಿಯು ಸಕ್ಕು ಮಾತಾಡಹತ್ತಿದಳು:—"ಹೀಗೆ ನೆವಹೇಳುವುದು ನೆಟ್ಟಗಲ್ಲ. ಇಂದು ನೀವು ಒಲ್ಲೆನೆಂದರೆ, ನಾನು ಕೇಳುವವನಳಲ್ಲ. ರವಿವಾರವೂ ಹುಡುಗರಿಗೆ ಕಲಿಸುವ ನೆವವನ್ನು ತೋರಿ, ಸುಭದ್ರೆಯ ಮನೆಗೆ ಹೋಗದಿದ್ದರೆ, ಇನ್ನು ನೀವು ಅವಳಿಗೆ ಮುಖವನ್ನು ತೋರಿಸಲಾರದವರಾಗಿ ಹೋದೀರಿ." ಬಳಿಕ ಭಾಮಿನಿಯು ಡ್ರಾಯವ್ಹರನನ್ನು ಕರೆದು "ಗಾಡಿಯನ್ನು ಸಿದ್ಧಗೊಳಿಸಿ, ಇವರನ್ನು ಕರೆಕೊಂಡು ಹೋಗಿ, ಸಪ್ತಾಪುರದಲ್ಲಿರುವ ಇವರ ತಂಗಿಯ ಮನೆಗೆ ಕಳುಹಿ, ಬೇಗನೆ ತಿರುಗಿ ಬಾ. ನಾನು ಬೇರೆ ಕಡೆಗೆ ಹೋಗಬೇಕಾಗಿದೆ," ಎಂದು ಹೇಳಿದಳು.

ರಂಗರಾಯನು ಹೊರಡುವ ಮೊದಲು ರಾಮನನ್ನು ಕರೆದನು; ಆದರೆ ರಾಮನಿಗೆ ಅತ್ತೆಯ ಮನೆಗೆ ಹೋಗುವ ಮನಸ್ಸಿರಲಿಲ್ಲ. ಅವನು ಸಣ್ಣಮೋರೆ ಮಾಡಿಕೊಂಡು ಮಲತಾಯಿಯನ್ನು ಅಂಟಿಕೊಂಡು ನಿಂತುಬಿಟ್ಟನು. ಭಾಮಿನಿಯು ಅವನನ್ನು ಮುಂದೆ ಎಳೆದುಕೊಂಡು ಮೈಮೇಲೆ ಕೈಯಾಡಿಸಿ: "ಇಂದು ಇವನನ್ನು ಕರೆದುಕೊಂಡು ಹೋಗುವುದು ಬೇಡ. ಮತ್ತೆ ಎಂದಾದರೂ ಕರೆದೊಯ್ಯುವಿರಂತೆ," ಎಂದು ಹೇಳಿದಳು.

"ಅವನು ಅತ್ತೆಯ ಮನೆಗೆ ಹೋಗಲಿಕ್ಕೆ ಮನಸ್ಸಿಲ್ಲದವನಾಗಿರುವಂತೆ ತೋರುತ್ತಿದೆ."

ಭಾಮಿನಿಯು ಮುಗುಳು ನಗೆಯಿಂದ: "ಅವನೊಬ್ಬನೇ ಏಕೆ, ನೀವೂ ಮನಸಿಲ್ಲದವರಾಗಿರುವಿರಿ," ಎಂದು ನುಡಿದು, ರಾಮನನ್ನು ಕರೆದುಕೊಂಡು ಬೇರೆ ಕಡೆಗೆ ಹೋದಳು. ರಂಗರಾಯನೊಬ್ಬನೆ ಹೊರಟು ಮೋಟರ ಬಂಡಿಯಲ್ಲಿ ಕುಳಿತನು. ಡ್ರಾಯವ್ಹರನು ಗಾಡಿಯನ್ನು ಮುಂದೆ ಸಾಗಿಸಿದನು.

ಸುಭದ್ರೆಯ ಗಂಡನಾದ ಭೀಮರಾಯನು ಪದವೀಧರನಾದ ವಕೀಲನು. ತನ್ನ ಹೋರೆಯಲ್ಲಿ ಹೆಸರಾದವನು. ರಂಗರಾಯನ ಸಮವಯಸ್ಕನು. ಈ ಇಬ್ಬರು ಚಿಕ್ಕಂದಿನಿಂದ ಸಹಪಾಠಿಗಳಾದ ಗೆಳೆಯರಾಗಿದ್ದು, ಈಗ ಬೀಗರಾಗಿದ್ದರು. ಕಾರಣ ರಂಗರಾಯನು ತನಗೆ ಬೇಕಾದಾಗ ನಿಸ್ಸಂಕೋಚವೃತ್ತಿಯಿಂದ ಭೀಮರಾಯನ ಮನೆಗೆ ಹೋಗುತ್ತಿದ್ದನು; ಭೀಮರಾಯನು ರಂಗರಾಯನ ಮನೆಗೆ ಬರುತ್ತಿದ್ದನು.

ಸುಭದ್ರೆಯ ಮನಸ್ಸು ಭಾಮಿನಿಯ ವಿಷಯದಲ್ಲಿ ಸರಿಯಾಗಿರಲಿಲ್ಲ. ಅದು ಹಲವು ಕಾರಣಗಳಿಂದ ಕಲುಷಿತವಾಗಿತ್ತು. ಸುಭದ್ರೆಯು ಬಹು ದಿನಗಳ ತಕು

ವಾಯು ಮನೆಗೆ ಬಂದ ಅಣ್ಣನನ್ನು ಕಂಡು ತನ್ನ ದೂರುಗಳನ್ನು ತೋರಿಕೊಳ್ಳ ಹತ್ತಿದಳು:-"ಒಮ್ಮೆ ತಿರಸ್ಕರಿಸಿ ಬಿಟ್ಟಿದ್ದ ಭಾಮಿನಿಯನ್ನು ಇಷ್ಟು ದಿವಸಗಳ ಮೇಲೆ ಮತ್ತೆ ಕರೆತಂದು, ಮನೆಯಲ್ಲಿಟ್ಟುಕೊಂಡಿರುವುದು ಸರಿಯಾದ ಕೆಲಸವಾಗಲಿಲ್ಲ! ಅಪ್ಪನು ಬುದ್ಧಿಪೂರ್ವಕವಾಗಿ ಭಾಮಿನಿಯನ್ನು ಮನೆಯಿಂದ ಹೊರಗೆ ತಳ್ಳಿದ್ದನು. ಇಂಥವಳನ್ನು ನೀನಾಗಿಯೇ ಕರಿಸಿಕೊಂಡಿರುವುದೇಕೆ? ನಿನಗೇನು ಮತ್ತೆ ಮದುವೆಯಾಗುತ್ತಿದ್ದಿಲ್ಲವೆ? ಇವಳಿಗಿಂತ ಸಾವಿರಾರು ಪಾಲು ಚಲುವೆಯೂ, ಗುಣವತಿಯೂ, ವಿದ್ಯಾಮಂಡಿತೆಯೂ ಆದ ಹೆಂಡತಿಯು ದೊರೆಯುತ್ತಿದ್ದಳಲ್ಲ! ಅಂಥವಳನ್ನು ಉಪೇಕ್ಷಿಸಿ, ಈ ಹಳೆ ಹೆಂಡತಿಯು ಬೆನ್ನ ಹತ್ತುವುದರಲ್ಲಿ ಪುರುಷಾರ್ಥವೇನು? ಸತ್ತು ಸ್ವರ್ಗದಲ್ಲಿರುವ ತಂದೆಯು ನಿನ್ನ ಈ ಕೃತಿಯನ್ನು ನೋಡಿ ಏನೆಂದು ಭಾವಿಸಬಹುದು? ಅವನೇನು ಬುದ್ಧಿಹೀನನಾಗಿದ್ದನೆ? ಕಾರಣವಿಲ್ಲದೆ ಭಾಮಿನಿಯನ್ನು ತೌರು ಮನೆಗೆ ಕಳುಹಿದ್ದನೆ? ಈಗಳಿನ ನಿನ್ನ ಈ ಕೃತಿಯನ್ನು ನೋಡಿ, ಸ್ವರ್ಗದಲ್ಲಿರುವ ಅವನು ಮಗನಿಂದಾದ ತನ್ನ ಅಪಮಾನವನ್ನು ಭಾವಿಸಿ, ಚಡಪಡಿಸದಿರನು! ನೀನು ಅಪ್ಪನ ಆಜ್ಞೆಯನ್ನು ಪಾಲಿಸುವದಕ್ಕಾಗಿ—ತಂದೆಯ ಕೃತಿಗೆ ಮಾನಕೊಡುವುದಕ್ಕಾಗಿ—ಈ ಕೆಲಸವನ್ನು ಮಾತಕ್ಕದ್ದಿದ್ದಿಲ್ಲ! ತಂದೆಯ ಆದೇಶವನ್ನು ಮೀರಿ, ಭಾಮಿನಿಯನ್ನು ಕರೆತಂದು ನೀನು ಸುಖವನ್ನು ಸುರಿದುಕೊಳ್ಳುವುದಾದರೂ ಏನು? ನಮ್ಮ ಸುಧಾರಿಸಿದ ಸಮಾಜದಲ್ಲಿ—ಬಂಧು-ಬಾಂಧವರ ಸಮ್ಮುಖದಲ್ಲಿ—ಇವಳು ನಮ್ಮ ಆತ್ಮೀಯಳೆಂದು ಹೇಳಲಿಕ್ಕೆ ಸಂಕೋಚಗೊಳ್ಳಬೇಕಾಗುತ್ತಿದೆ. ಕಾರಣ ನಮ್ಮ ಸುಧಾರಿಸಿದ ಸಮಾಜದ ಉತ್ಸವಾದಿಗಳಲ್ಲಿ ಇವಳನ್ನು ಕರೆದೊಯ್ಯುವಂತಿಲ್ಲ. ಅಣ್ಣಾ, ಬಹಳ ಹೇಳಲೇನು? ಭಾಮಿನಿಯನ್ನು ನನ್ನ ಅತ್ತಿಗೆಯೆಂದು ಹೇಳಿಕೊಳ್ಳಲಿಕ್ಕೆ ನನಗೆ ತುಂಬ ನಾಚಿಕೆಯುಂಟಾಗುತ್ತಿದೆ. ನಾನಿನ್ನು ಸಮಾಜದಲ್ಲಿ ಮೋರೆ ತೋರದವಳಾಗುವೆನು!............"

ಭೀಮರಾಯನು ಬಳಿಯಲ್ಲಿಯೇ ಇದ್ದನು. ಇವನು ಅಪರಿಚಿತಳಾಗಿದ್ದ ಭಾಮಿನಿಯ ಪಕ್ಷವನ್ನು ವಹಿಸಿ ಮಾತಾಡಬೇಕೆಂದಿದ್ದನು; ಆದರೆ ಹೆಂಡತಿಯ ಕೋಪದೃಷ್ಟಿಯನ್ನು ನೋಡಿ, ಮಾತಾಡದೆ ಸುಮ್ಮನಾದನು. ರಂಗರಾಯನು ಯಾವ ಮಾತನ್ನೂ ಆಡದೆ ಸುಮ್ಮನಿದ್ದನು. ಸುಭದ್ರೆಯು ಮತ್ತಷ್ಟು ಕೋಪದಿಂದ ಮಾತಾಡಹತ್ತಿದಳು:-"ಅಣ್ಣಾ, ನಾನೇನೂ ಅರಿಯೆನೆಂದು ನೀನು ತಿಳಿದಿರುವೆಯಾದೀತು; ಆದರೆ ನಿಜಸ್ಥಿತಿಯು ಹೀಗಿಲ್ಲ. ನಾನು ನಿನ್ನ

ಸಂಸಾರದ ಯಾವತ್ತು ಸಂಗತಿಗಳನ್ನು ತಿಳಿದುಕೊಂಡಿರುವೆನು ಭಾಮಿನಿಯು ಮನೆಯಲ್ಲಿ ಕಾಲಿಡುತ್ತಲೆ ಖಾದೀರನನ್ನು ಮುಸಲ್ಮಾನನೆಂಬ ಕಾರಣದಿಂದ ಹೊರಗೆ ಹಾಕಿದಳು. ಲಚಿಮನು ಕೀಳಜಾತಿಯವನೆಂದು ಮನೆಬಿಡಿಸಿ ಕಳುಹಿದಳು. ಯಾವಳು ಜಾತಿಭೇದದ ವಿಷಯದಲ್ಲಿ ಇಷ್ಟೊಂದು ಸಂಕುಚಿತ ವಿಚಾರವುಳ್ಳವಳಾಗಿರುವಳೊ, ಅವಳೊಡನೆ ಬಾಳುವೆ ಮಾಡುವುದು ಹೇಗೆ? ನನ್ನ ಮಾತುಗಳಿಂದ ಯಾರು ಎಷ್ಟೇ ಕೋಪಗೊಳ್ಳಲಿ, ನಾನದನ್ನು ಲಕ್ಷಿಸುವುದಿಲ್ಲ. ಈ ಹೆಂಡತಿಯು ನಿನಗೆ ತೀರ ಅನುಪಯುಕ್ತಳೆಂದೂ, ಅಯೋಗ್ಯಳೆಂದೂ ನಾನು ಸಾರಿ ಹೇಳುತ್ತೇನೆ!''

ರಂಗರಾಯನು ಮೆಲ್ಲ ಮೆಲ್ಲನೆ ಮಾತಾಡಹತ್ತಿದನು:—"ತಂಗಿ, ನೀನು ಹಲವು ಸಂಗತಿಗಳನ್ನು ಅರಿತಿರುವೆಯಾದರೂ, ಅವುಗಳ ಬಗ್ಗೆ ಚನ್ನಾಗಿ ವಿಚಾರ ಮಾಡಿರುವಂತೆ ಕಾಣುವದಿಲ್ಲ. ಅವಳು ಖಾದೀರ ಹಾಗು ಲಚಿಮರನ್ನು ಬುದ್ಧಿಪೂರ್ವಕ ಕೆಲಸ ಬಿಡಿಸಿ ಕಳುಹಿದವಳಲ್ಲ ಅವರು ಹೆಂಡಿರು-ಮಕ್ಕಳನ್ನು ನೋಡುವುದಕ್ಕೆ ಆತುರರಾಗಿದ್ದರಂತೆ. ಅವಳು ಅವರ ಎಲ್ಲ ಬಾಕಿಯನ್ನು ತೀರಿಸಿ, ಕಳುಹಿಕೊಟ್ಟಿರುವಳು. ಅವರು ಸಂತೋಷದಿಂದ ತಮ್ಮ ಊರಿಗೆ ಹೋಗಿರುವರು............''

"ರಮೆಯು ಇರುವಾಗ ಅವರಿಗೆ ಹೆಂಡತಿ ಮಕ್ಕಳನ್ನು ನೋಡುವ ಕುತೂಹಲತೆಯೇಕಾಗಲಿಲ್ಲ? ಭಾಮಿನಿಯು ಮನೆಯಲ್ಲಿ ಕಾಲಿಕ್ಕುತ್ತಲೆ, ಅವರು ಆತುರರಾಗಿ ಓಡಿಹೋದದ್ದೇಕೆ? ಅಣ್ಣಾ, ನಾನಷ್ಟು ಬುದ್ಧಿಹೀನೆಯಲ್ಲ! ನನಗೆ ಎಲ್ಲವೂ ತಿಳಿಯುತ್ತಿದೆ!''

ರಂಗರಾಯನು ಮಾತಾಡದೆ ಸುಮ್ಮನಾದನು. ಸುಭದ್ರೆಯು:--"ಅಣ್ಣಾ, ದಾಸ-ದಾಸಿಯರೆಲ್ಲ ಮನೆಬಿಟ್ಟು ಹೋಗಿದ್ದಾರೆ. ಈಗ ನಿನ್ನ ಕೆಲಸವು ಹೇಗೆ ಸಾಗುತ್ತಿದೆ?'' ಎಂದು ಕೇಳಿದಳು.

"ಒಂದು ವಿಧವಾಗಿ ಸಾಗಿದೆ. ತೊಂದರೆಯೇನೂ ಇಲ್ಲ.'' ರಂಗರಾಯನು ನುಡಿದನು.

"ಮನೆಬಿಟ್ಟು ಹೋಗಿದ್ದ ಸೇವಕರು ತಿರುಗಿ ಬಾರರೆಂಬುದನ್ನು ನಾನು ಬಲ್ಲೆನು. ನೀನು ಹೊಸ ಚಾಕರರನ್ನಿಟ್ಟುಕೊಂಡು ಮೊದಲಿನಂತೆ ಕೆಲಸ ಸಾಗಿಸು. ಸಮಾಜವಿದೆ, ಬಂಧು ಬಾಂಧವರಿದ್ದಾರೆ. ಆಚಾರ್ಯರ ಮನೆಯಂತೆ ನಿನ್ನ ಮನೆಯಾದರೆ ನಡೆಯದು. ಸಮಾಜದಲ್ಲಿ ಹೆಸರ ಕೆಡಿಸಿಕೊಳ್ಳ

ದು ಬಹು ಘಾತುಕವು."

"ತಂಗಿ, ಈಗೇನೂ ಅಂಥ ಪ್ರಸಂಗ ಬಂದಿಲ್ಲ. ಹೆಚ್ಚು ಸೇವಕರನ್ನಿಟ್ಟು ಕೊಳ್ಳುವುದು ಅವಶ್ಯವಾಗಿ ತೋರಿದರೆ, ಆಗ್ಗೆ ಹಾಗೆ ಮಾಡಬಹುದಾಗಿದೆ."

"ಈಗ ಚಾಕರರ ಅವಶ್ಯಕತೆಯಿಲ್ಲವೆ? ಅಣ್ಣಾ, ನೀನೇನೆನ್ನುವಿಯೊ ನನಗೆ ತಿಯದಾಗಿದೆ! ಒಮ್ಮೆ ನಿನ್ನೊಡನೆ ನಿನ್ನ ಮನೆಗೆ ಬಂದು ಈಗಳಿನ ಸ್ಥಿತಿಯನ್ನು ವಲೋಕಿಸಬೇಕಾಗಿದೆ; ಆದರೆ ನಿನ್ನ ಮನೆಗೆ ಬರಲಿಕ್ಕೆ ನನ್ನ ಮನಸ್ಸು ಒಪ್ಪ ಾಗಿದೆ. ತೌರು ಮನೆ. ಹೋಗದಿದ್ದರೆ ನಿರ್ವಾಹವಿಲ್ಲ. ಹೋದರೆ ಮನ್ನಣೆ ಲ್ಲ. ಅಣ್ಣಾ, ಈ ಭಾವನೆಯಿಂದ ನನಗೆ ಎಷ್ಟು ವ್ಯಥೆಯಾಗುತ್ತಿರಬಹು ಬದನ್ನು ನೀನೆ ಊಹಿಸು. ಬಹಳವೇನು? ನಿನ್ನ ಮನೆಗೆ ಬಂದರೆ, ನನಗೆ ಂದು ಕಪ್ಪು ಚಹ ಸಹ ಸಿಗುವಂತಿಲ್ಲ!"

ಭೀಮರಾಯನು ಇದು ವರೆಗೆ ಪಿಟ್ಟೆಂದು ಮಾತಾಡಿರಲಿಲ್ಲ. ಅಣ್ಣ-ತಂಗಿ ರ ಮಾತು-ಕತೆಗಳನ್ನು ಕೇಳುತ್ತ ಸುಮ್ಮನಿದ್ದನು. ಇನ್ನು ತಡೆಯದವ ಾಗಿ ಹೇಳಹತ್ತಿದನು:—"ಮೊದಲು ಒಮ್ಮೆ ಹೋಗಿ ನೋಡು. ಚಹವು ುವದೊ-ಇಲ್ಲವೊ ಎಂಬುದನ್ನು ಪರೀಕ್ಷಿಸು. ಬಳಿಕ ಮಾತಾಡು. ಮೊದಲೇ ರ್ಕದಿಂದ ಮಾತಾಡಿ, ಮಂದಿಯ ಮನಸ್ಸನ್ನು ನೋಯಿಸುವದು ಸರಿಯಲ್ಲ!"

"ನಾನು ಕೇವಲ ಊಹೆಯಿಂದ ಮಾತಾಡಿದವಳಲ್ಲ. ಹೋಗಿ ದರ್ಶನ ಕ್ಕೊಂಡು ಪರೀಕ್ಷೆ ಮಾಡಿಕೊಂಡು ಬಂದು ಮಾತಾಡಿರುವೆನು," ಎಂದು ಡಿದು, ಸುಭದ್ರೆಯು ಬೇರೆ ಕಡೆಗೆ ಹೋದಳು. ಭೀಮರಾಯನು ಮಾತಾಡ ತ್ತಿದನು:—"ನನಗಾವುದೂ ಗೊತ್ತಿಲ್ಲ. ನಿಜ ಸಂಗತಿಯೇನು? ಚಾಕರ ಲ್ಲ ಮನೆಯಿಂದ ಹೊರಗೆ ಹಾಕಿ, ಏನು ಮಾಡಬೇಕೆಂದಿರುವೆ? ಸಾಧು ಾರ್ಗವನ್ನವಲಂಬಿಸಬೇಕೆಂಬ ಆಲೋಚನೆಯಲ್ಲಿರುವೆಯಾ?"

"ಹೀಗೇನೂ ನನ್ನ ಆಲೋಚನೆಯಿಲ್ಲ. ಸಂಸಾರವು ಮೊದಲಿನಂತೆಯೆ ಾಗಿದೆ. ಇಬ್ಬರು ಸೇವಕರು ಮಾತ್ರ ಕಡಿಮೆಯಾಗಿದ್ದಾರೆ; ಆದರೆ ಆ ವಕರು ಇಲ್ಲದಾಗಿರುವುದರಿಂದ ನನಗೇನೂ ತೊಂದರೆಯಾಗಿಲ್ಲವಿಷ್ಟೇ ಅಲ್ಲ; ಸಾರ ರಥವು ಮೊದಲಿಗಿಂತಲೂ ವ್ಯವಸ್ಥಿತ ರೀತಿಯಿಂದ ಸಾಗಿದೆ. ನೋಡು ತರಿಗೆ ಹೆಚ್ಚು ಚಂದ ಕಾಣುವಂತೆ ನಡೆದಿದೆ."

"ಸೇವಕರ ಕೊರತೆಯಲ್ಲೂ ಹೆಚ್ಚು ವ್ಯವಸ್ಥೆಯಿಂದ ನಡೆದಿದೆಯೇ? ಆಹಾ ! ವ್ಯವಸ್ಥೆಯು ಹೇಗೆ ಸಾಗಿದೆ?"

"ಅಡುಗೆಯ ಆಚಾರಿಯೂ ಇದ್ದಾನೆ. ಆದರೂ ಅವಳೇ ಅಡುಗೆಯ ಮಾಡುವಳು. ಇದರಿಂದ ಪದಾರ್ಥಗಳು ಹೆಚ್ಚು ಸ್ವಚ್ಛವಿರುವವು. ರುಚಿಕರವಾಗಿರುವವು. ಊಟದ ವ್ಯವಸ್ಥೆಯು ಉತ್ಕೃಷ್ಟವಾಗಿದೆ" ರಂಗರಾಯನೆಂದನು.

"ಆಚಾರಿಯ ಅಡಿಗೆಗಿಂತಲೂ ಗೃಹಿಣಿಯರ ಅಡುಗೆಯು ಉತ್ತಮವೆಂಬುದನ್ನು ನಾನೂ ಒಪ್ಪುತ್ತೇನೆ ಗೃಹಿಣಿಯರು ಮನೆಯವರ ಊಟ-ಉಡಿಗೆಗಳ ವಿಷಯದಲ್ಲಿ ಸ್ವತಃ ಕಾರ್ಯ ಮಾಡಹತ್ತಿದರೆ. ಪ್ರಪಂಚಕ್ಕೆ ಬಹಳ ಹಿತವಾಗುತ್ತಿದೆ; ಆದರೆ ಈ ಮಾತನ್ನು ನಾನು ಒತ್ತಿ ಉಚ್ಚರಿಸಲಾರದವನಾಗಿರುವೆನು, ಆಗ್ರಹದಿಂದ ಬಳಿಕೆಯಲ್ಲಿ ತರಲಾರದವನಾಗಿರುವೆನು. ಇರಲಿ ನೀನು ನಿನ್ನ ಸಂಸಾರ ರಥವನ್ನು ಮುಂದೆಯೂ ಹೀಗೆಯೆ ಸಾಗಿಸಬೇಕೆಂದಿರುವೆಯಾ?" ಭೀಮರಾಯನು ಕೇಳಿದನು.

ರಂಗರಾಯನು ಕ್ಷಣಕಾಲ ಸುಮ್ಮನಿದ್ದು ಬಳಿಕ ಹೇಳಹತ್ತಿದನು:—"ನಿಜವಾಗಿ ಹೇಳಬೇಕಾದರೆ, ಸಂಸಾರದ ಎಲ್ಲ ಹೊರೆಯನ್ನು ಅವಳ ಮೇಲೆ ಹೊರಿಸಿ, ನಾನು ಹೊರಗಿರುವೆನು. ಅವಳು ತನ್ನ ಇಷ್ಟವಿರುವಂತೆ ವ್ಯವಸ್ಥೆ ಮಾಡಿಕೊಳ್ಳಲಿ. ನಾನು ಅವಳ ಇಚ್ಛೆಯ ವಿರುದ್ಧವಾಗಿ, ಸಂಸಾರದ ವ್ಯವಸ್ಥೆಯಲ್ಲಿ ಕೈಹಾಕ ಬಯಿಸುವದಿಲ್ಲ."

"ಭೀಮರಾಯನು ಬಾಗಿಲ ಕಡೆಗೆ ನೋಡಿ, ಇನ್ನು ಹೆಚ್ಚಿಗೆ ಮಾತಾಡ ಬೇಡ, ಸುಮ್ಮನಿರು. ಈ ಮಾತುಗಳು ನಿನ್ನ ಸಹೋದರಿಯ ಕಿವಿಗೆ ಬಿದ್ದರೆ, ಮಹಾನರ್ಥವಾಗದಿರದು!" ಎಂದು ನುಡಿದನು

ರಂಗರಾಯನು ಈ ಮಾತಿನ ಕಡೆಗೆ ಲಕ್ಷ್ಯವಿರಿಸದೆ, ತನ್ನ ಮಾತನ್ನು ಮುಂದೆ ಸಾಗಿಸಿದನು:—"ಹೀಗೆ ಮಾಡುವುದರಿಂದ ನನ್ನದೊಂದು ದೊಡ್ಡ ಚಿಂತೆಯು ಪರಿಹಾರವಾಗುವದರಲ್ಲಿದೆ ತಿಂಗಳ ಪಗಾರವು ತಿಂಗಳ ವೆಚ್ಚಕ್ಕೆ ಸಾಲುತ್ತಿದ್ದಿಲ್ಲ. ಕಾರಣ ನಾನು ಹಲವು ಸ್ಥಳಗಳಲ್ಲಿ ಸಾಲ-ಕೈಗಡಗಳನ್ನು ಮಾಡಬೇಕಾಗುತ್ತಿತ್ತು. ಉದ್ದರಿಯಿಂದ ಸಾಮಾನು ಕೊಟ್ಟ ಅಂಗಡಿಕಾರರ ಉಪದ್ರವವಂತೂ ಬಹು ತಾಪದಾಯಕವಾಗಿತ್ತು. ಈ ಮಹನೀಯರ ಪೀಡೆಗೆ ಗುರಿಯಾಗಿದ್ದ ನನಗೆ ಎಷ್ಟೋ ಸಲ ಊಟವು ರುಚಿ ಹತ್ತುತ್ತಿರಲಿಲ್ಲ. ಇನ್ನು ಆ ಭಾವನೆಗೆ ಅವಕಾಶವಿಲ್ಲ. ಅವಳು ಹೊಸದಾಗಿ ಸಾಲವಾಗದಂತೆ ಎಚ್ಚರದಿಂದ ವೆಚ್ಚ ಮಾಡುವಳಷ್ಟೆ ಅಲ್ಲ; ಒಂದೆರಡು ವರ್ಷಗಳಲ್ಲಿ ಹಳೆಯ ಸಾಲವನ್ನೆಲ್ಲ ತೀರಿಸಿ, ನನ್ನನ್ನು ಋಣಮುಕ್ತನನ್ನಾಗಿ ಮಾಡುವೆನೆಂದು ವಚನ

ಕೊಟ್ಟಿದ್ದಾಳೆ''

"ನೀನು ಸುದೈವಿಯೆ ಸರಿ! ದೇವರು ನಿನ್ನ ಮೊರೆ ಕೇಳಿದನೆನ್ನಬೇಕು! ನಿನ್ನಂತೆಯೆ ನಾನೂ ಆರ್ಥಿಕ ಅಡಚಣಿಯಲ್ಲಿ ಬಳಲುತ್ತಿದ್ದೇನೆ; ಆದರೆ ನನ್ನನ್ನು ಈ ಸಂಕಟದಿಂದ ಮುಕ್ತನನ್ನಾಗಿ ಮಾಡುವವರಾರೂ ದೊರೆಯದಿದ್ದಾರೆ!"

ರಂಗರಾಯನು ಪತ್ನಿಯ ಪ್ರಥಮ ದರ್ಶನ ಸಮಯದಲ್ಲಿ ಆದ ಮಾತು-ಕತೆಗಳನ್ನು ವಿವರಿಸಿ ಹೇಳಿ: "ಈ ವರೆಗಿನ ರಾಡಿಯು ತೊಳೆದು ಹೋಗುವ ವರೆಗೆ ಅವಳು ತನ್ನ ಇಚ್ಛೆಯ ಮೇರೆಗೆ ವ್ಯವಸ್ಥೆಯನ್ನಿಟ್ಟುಕೊಳ್ಳಲಿ. ಕಳೆದ ಹದಿನೈದು ದಿನಗಳ ಸ್ಥಿತಿಯನ್ನು ನೋಡುತ್ತಿರಲು, ಅವಳ ಹಿಡತದ ವೆಚ್ಚದಿಂದ ನನಗೇನೂ ತೊಂದರೆಯಾಗಿಲ್ಲ ಅಂದಬಳಿಕ ನಿಷ್ಕಾರಣವಾಗಿ ಅವಳ ವ್ಯವಸ್ಥೆಯಲ್ಲಿ ಕೈಹಾಕಿ ಮನೆಯಲ್ಲಿ ಅಶಾಂತತೆಯನ್ನುಂಟುಮಾಡಿಕೊಳ್ಳುವುದರಲ್ಲಿ ಪ್ರಯೋಜನವೇನು? ದಿನಗಳು ಮೊದಲಿಗಿಂತಲೂ ಸೊಗಸಿನಿಂದ ಕಳೆಯುತ್ತಲಿವೆ ಇನ್ನು ಕೆಲವು ದಿನಗಳನ್ನು ಹೀಗೆಯೇ ಕಳೆದು ಋಣಮುಕ್ತನಾಗಿ ಸಮಾಧಾನದ ಉಸಿರ್ಗರೆಯಬೇಕೆಂದಿದ್ದೇನೆ'' ಎಂದು ಹೇಳಿದನು.

ಭೀಮರಾಯನು ಏನೋ ಮಾತಾಡಬೇಕೆಂದಿದ್ದನು; ಆದರೆ ಹೆಂಡತಿಯು ಬಂದುದನ್ನು ನೋಡಿ ಬಾಯಿಯ ಮುಚ್ಚಿದನು.

ರಂಗರಾಯನ ಮನಸ್ಸಿನಲ್ಲಿ ಸುಭದ್ರೆಯನ್ನು ತನ್ನ ಮನೆಗೆ ಕರೆದೊಯ್ಯುವದಿರಲಿಲ್ಲ, ಆದರೆ ಸುಭದ್ರೆಯು ಬರುವೆನೆಂದು ಎರಡು-ಮೂರು ಸಲ ಹೇಳಿದಳು. ರಂಗರಾಯನು ನಿರುಪಾಯನಾದನು. ಸುಭದ್ರೆಯು ಈ ವರೆಗೆ ಅಣ್ಣನ ಮುಂದೆ ಭಾಮಿನಿಯ ವಿಷಯವಾಗಿ ದುರಭಿಪ್ರಾಯವನ್ನು ಪ್ರಕಟಿಸಿ ತಣಿದಿರಲಿಲ್ಲ. ಇವಳು ಈ ವಿಷಯದಲ್ಲಿ ಇನ್ನೂ ಹೆಚ್ಚಾಗಿ ಮಾತಾಡಬೇಕೆಂದಿದ್ದಳು. ಇದಕ್ಕಾಗಿ ತನ್ನ ಮನೆಗಿಂತಲೂ ಅಣ್ಣನ ಮನೆಯೆ ಹೆಚ್ಚು ಉಪಯುಕ್ತ ಕ್ಷೇತ್ರವೆಂದು ಬಗೆದಿದ್ದಳು. ಯಾಕೆಂದರೆ, ಅಲ್ಲಿ ಭಾಮಿನಿಯೊಡನೆಯೂ ವಾದ-ವಿವಾದ ಮಾಡುವ ಸುಯೋಗವು ದೊರೆಯುವಂತಿತ್ತು. 'ಹಳ್ಳಿಯ ಹೆಂಗುಸವಳು. ವಿದ್ಯೆಗಲಿತವಳಲ್ಲ. ಅವಳನ್ನು ಪತಿಯ ಸಮಕ್ಷಮದಲ್ಲಿ ವಾದ-ವಿವಾದದಲ್ಲಿ ಕೆಡಕಿಸಿದರೆ ತೀರಿತು. ಅಲ್ಪಾವಕಾಶದಲ್ಲಿಯೆ ಉತ್ತರ ಕೊಡಲಾರದವಳಾಗಿ ಪರಾಜಯವನ್ನೊಪ್ಪಿಕೊಳ್ಳುವಳು. ಆ ಮೇಲೆ ಅವಳನ್ನು ಹೀನಳೆಂದು ನಿರ್ಣಯಿಸಲಿಕ್ಕೆ ಅವಕಾಶವಾಗದು' ಎಂದು ಯೋಚಿಸಿದ್ದ ಸುಭದ್ರೆಯು ಇಂದಿನ ಸುಯೋಗವನ್ನು ವ್ಯರ್ಥ ಹೋಗಗೊಡಲಿಲ್ಲ.

ಊಟ-ಉಡಿಗೆಗಳ ತರುವಾಯ ರಂಗರಾಯನೂ, ಭೀಮರಾಯನೂ, ಸುಭದ್ರೆಯೂ, ಭೀಮರಾಯನ ತಂಗಿಯಾದ ಸುಶೀಲೆಯೂ ಮೋಟರ ಬಂಡಿಯನ್ನೇರಿ ಮಾಳಮಡ್ಡಿಗೆ ಹೊರಟರು. ರಂಗರಾಯನ ಬಂಗಲೆಗೆ ಬಂದರು.

೭

ಸುಮಾರು ಎರಡೂವರೆ ಗಂಟೆಯಾಗಿರಬಹುದು. ರಾಮನು ಮನೆಯ ಹೊರಬಾಗಿಲದ ಹೊಸ್ತಿಲ ಮೇಲೆ ಕುಳಿತಿದ್ದನು. ಅತ್ತಿತ್ತ ಹಲವು ಸಾಮಾನುಗಳು ಬಿದ್ದಿದ್ದುವು ರಾಮನು ತನ್ನ ಮುರಿದ ಮೋಟರ ಬಂಡಿಯನ್ನು ದುರಸ್ತ ಮಾಡುವುದರಲ್ಲಿ ವ್ಯಸ್ತನಾಗಿದ್ದನು

ರಾಮನು ಒರಿ ಮೈಯಿಂದಿದ್ದನು. ಹಣೆಯ ಮೇಲೆ ಸ್ಪಷ್ಟವಾದ ಗಂಧದ ಗುರುತಿತ್ತು. ಮೈಯಲ್ಲೆಲ್ಲ ಗೋಪಿ ಚಂದನದ ಮುದ್ರೆಗಳಿದ್ದುವು. ಮೋಟರ ಬಂಡಿಯಿಂದಿಳಿದು ಮನೆಯನ್ನು ಪ್ರವೇಶಿಸಬೇಕೆಂದಿರುವ ರಂಗರಾಯನೂ, ಇವನ ಸಂಗಡಿಗರೂ ರಾಮನನ್ನು ನೋಡಿದರು. ಸುಭದ್ರೆಯು ನಸು ನಗೆಯಿಂದ: "ಮಗು, ಒಳ್ಳೆ ಚಂದ ಕಾಣುತ್ತಿರುವೆ! ಸುಖದಿಂದ ಬಹು ಕಾಲ ಬಾಳು!" ಎಂದು ನುಡಿದು ಉಪಹಾಸ ಮಾಡಿದಳು. ರಂಗರಾಯನು ಬಹಳ ಲಜ್ಜಿತನಾದನು. ಮೃದು ಸ್ವಭಾವದ ಇವನು ಯಾವ ಕಾರಣದಿಂದಲೂ ಗೊಂದಲವೆಬ್ಬಿಸಲಿಕ್ಕೆ ಮನಸ್ಸು ಮಾಡದವನಾಗಿದ್ದನು, ಆದರೆ ತಂಗಿಯ ಉಪಹಾಸವು ಇವನಿಗೆ ಅಸಹ್ಯವಾಗಿತ್ತು ಇವನು ಕಡು ಕೋಪದಿಂದ ಹುಡುಗನ ಕೆನ್ನೆಗೆ ಹೊಡೆದು: "ಮೂರ್ಖನೆ, ಇದೇನು? ಎಲ್ಲಿ ಹೋಗಿದ್ದೆ? ಇದನ್ನಾರು ಹಚ್ಚಿದರು?" ಎಂದು ಕೇಳಿದನು. ರಾಮನು ಅಳುತ್ತಳುತ್ತ ಅಸ್ಪಷ್ಟವಾಗಿ ಮಾತಾಡಿದನು. ಅದರ ತಾತ್ಪರ್ಯವಿಂತು:—"ಇಂದು ಮುಂಜಾವಿನಲ್ಲಿ ಅವ್ವನ ಸಂಗಡ ಸೋಮೇಶ್ವರಕ್ಕೆ ಹೋಗಿದ್ದೆನು." ರಂಗರಾಯನು ಮಗನನ್ನು ದಬ್ಬಿಕೊಟ್ಟು: "ಹೋಗು, ಬೇಗ ಹೋಗು! ಸಂಸ್ಕಾರವನ್ನು ಹಚ್ಚಿಕೊಂಡು ಚನ್ನಾಗಿ ಮೈ ತೊಳೆದುಕೊ!" ಎಂದು ನುಡಿದು ಮುಂದೆ ನಡೆದನು. ಎಲ್ಲರೂ ಮುಂದೆ ಸಾಗಿ, ರಂಗರಾಯನು ಓದುತ್ತ ಕುಳ್ಳಿರುವ ಕೋಣೆಯನ್ನು ಪ್ರವೇಶಿಸಿ ಕುಳಿತರು ಕ್ಷಣಕಾಲ ಯಾರ ಬಾಯಿಯಿಂದಲೂ ಮಾತು ಹೊರಡಲಿಲ್ಲ. ರಂಗರಾಯ-ಸುಭದ್ರೆಯರ ಮುಖವಂತೂ ಬಹು ಗಂಭೀರವಾಗಿತ್ತು. ರಂಗರಾಯನ ಮುಖ ಮುದ್ರೆಯಿಂದ ಇಷ್ಟೊಂದು ಭಾವಿಕತನವು ತೀರ ಅನುಚಿತವು,

ಎಂಬ ಭಾವನೆಯು ವ್ಯಕ್ತವಾಗುತ್ತಿತ್ತು. ಸುಭದ್ರೆಯ ಮೋರೆಯ ಲಕ್ಷಣದಿಂದ ನಾನು ಹೀಗಾಗುವುದೆಂದು ಮೊದಲೇ ತರ್ಕಿಸಿದ್ದೆನು, ಎಂಬ ಅಭಿಪ್ರಾಯವು ಸೂಚಿತವಾಗುವಂತಿತ್ತು.

ಮೊದಲು ಭೀಮರಾಯನೇ ಮಾತಾಡಲಿಕ್ಕೆ ಮುಂದರಿದನು. ಇವನು ತುಸ ನಕ್ಕು ಇಂತು ನುಡಿದನು:—"ರಂಗ, ನೀನಿದೇನು ಮಾಡಿದೆ? ಒಮ್ಮೆಲೆ ಚಹಾಪಾನ ಸಮಾರಂಭಕ್ಕೆ ಸುದರ್ಶನ ಚಕ್ರವನ್ನು ಹಿಡಿದು ಬಿಟ್ಟೆ! ರಾಮುನಿಗೆ ಹೊಡೆದೆಯೇಕೆ? ನಿನ್ನ ಬೆನ್ನ ಹತ್ತಿ ಬಂದುದು ನನ್ನಿಂದ ಅನುಚಿತವಾಯಿತು!"

ಸುಭದ್ರೆಯು ಪತಿಯ ಮಾತುಗಳನ್ನು ಕೇಳಿ ವಿಸ್ಮಯಗೊಂಡಳು. ಇವಳು ಗಂಡನ ಮೋರೆಯ ಕಡೆಗೆ ನೋಡುತ್ತ: "ಇದಕ್ಕೂ, ಚಹಾಪಾನಕ್ಕೂ ಸಂಬಂಧವೇನು? ಚಹಾಪಾನ ಸಮಾರಂಭಕ್ಕೆ ಸುದರ್ಶನಚಕ್ರ ಹಿಡಿಯುವದೆಂದರೇನು? ನೀವು ಅದನ್ನು ಹುಡುಗಾಟಿಕೆಯೆಂದು ತಿಳಿದಿರಾ?" ಎಂದು ಕೇಳಿದಳು

"ಹುಡುಗಾಟವಾಗಲಿ-ಆಗದಿರಲಿ, ಭಯಾನಕ ಆಟ ಮಾತ್ರವಲ್ಲ! ಅಷ್ಟಕ್ಕಾಗಿ ಹೀಗೆ ರಂಜಾಟವೆಬ್ಬಿಸುವ ಕಾರಣವಿದ್ದಿಲ್ಲ!" ಭೀಮರಾಯನೆಂದನು.

"ಇದರರ್ಥವೇನು?" ಸುಭದ್ರೆಯು ಕೇಳಿದಳು.

"ಅರ್ಥವು ಸಹಜವಾಗಿಯೇ ಆಗುವಂತಿದೆ ನಾನೇನೂ ಗೂಢವಾಗಿ ಮಾತಾಡಿದವನಲ್ಲ. ಇಂದು ಕಾರ್ತಿಕಮಾಸದ ಏಕಾದಶಿಯು ಪರ್ವಣಿಯು ದಿವಸ. ರಾಮುನು ತಾಯಿಯು ಸಂಗಡ ಸೋಮೇಶ್ವರಕ್ಕೆ ಹೋಗಿದ್ದನು ಅಲ್ಲಿ ಹೊಂಡದಲ್ಲಿ ಸ್ನಾನ ಮಾಡಿದನು. ಒಂದು ದಿನ ನಳದ ನೀರಿನಿಂದ ಜಳಕ ಮಾಡದೆ, ತೀರ್ಥಸ್ಥಳದಲ್ಲಿ ಸ್ನಾನ ಮಾಡಿದರೆ ಮಹಾಪಾತಕ ಮಾಡಿದಂತಾಯಿತೆ? ನನಗಂತೂ ಹಾಗೆ ಅನಿಸುವುದಿಲ್ಲ!"

ಸುಭದ್ರೆಯು ಗಂಡನ ವಿಷಯದಲ್ಲಿ ಅತಿಶಯ ಕೋಪಗೊಂಡವಳಾಗಿ ಕೇಳಿದಳು: 'ಮುಂದೆ?'

"ಮುಂದಿನ ಸಂಗತಿಯೂ ಸಾಹಜಿಕವಾದದ್ದು. ಅಲ್ಲಿ ಓರಿಗೆಯ ಗೆಳೆಯರಾಗಲಿ, ವೈದಿಕ ಬ್ರಾಹ್ಮಣರಾಗಲಿ ಕಲೆತಿರಬಹುದು. ಅವರು ಹುಡುಗಾಟಿಕೆಗಾಗಲಿ, ದಕ್ಷಿಣೆಯ ಆಶೆಯಿಂದಾಗಲಿ ರಾಮುನಿಗೆ ಗಂಧ ಹಚ್ಚಿರಬಹುದು; ಗೋಪಿಚಂದನದ ಮುದ್ರೆಗಳನ್ನೊತ್ತಿರಬಹುದು. ಇದರಲ್ಲಿ ಮಹಾಪರಾಧದ ಕಾರ್ಯವಾವುದು?"

"ಇದರ ಪರಿಣಾಮವೇನೆಂಬುದನ್ನು ಬಲ್ಲಿರಾ?" ಸುಭದ್ರೆಯು ಕೋಪ ದಿಂದಲೆ ಕೇಳಿದಳು.

"ಸಾಯಂಕಾಲದಲ್ಲಿ ಕೈ-ಕಾಲು-ಮೋರೆಗಳನ್ನು ತೊಳೆದುಕೊಂಡ ಕೂಡಲೆ ಕಾಣದಾಗ ಹೋಗುವದು—ಇದೇ ಅದರ ಕೊನೆಯ ಪರಿಣಾಮವು!"

"ಇಷ್ಟು ಮಾತ್ರವೆ! ಮತ್ತೇನೂ ಇಲ್ಲವೆ? ನಿಮ್ಮ ಮಕ್ಕಳಿದ್ದರೆ, ನೀವು ಹೀಗೆ ಮಾಡಗೊಡುತ್ತಿದ್ದಿರಾ?" ಸುಭದ್ರೆಯು ಕೇಳಿದಳು.

"ನನಗೆ ಮಕ್ಕಳೇ ಇಲ್ಲ ಅಂದಬಳಿಕ ಇಲ್ಲದ್ದನ್ನು ಇದೆಯೆಂದು ಭಾವಿಸಿ 'ವಾದವಿವಾದ ಮಾಡುವುದರಲ್ಲಿ ಪ್ರಯೋಜನವೇನು?''

ಈ ವಾಗ್ಬಾಣವು ಸುಭದ್ರೆಯ ಹೃದಯಕ್ಕೆ ಬಲವಾಗಿ ತಾಗಿತು. ಅವಳು ಆಹತಳಾಗಿ ಮಾತಾಡಹತ್ತಿದಳು: "ವಾದವಿವಾದ ಮಾಡುವುದು ವ್ಯರ್ಥವಾಗ ಬಹುದು; ತೊಳೆದುಕೊಂಡರೆ ಚಂದನದ ಕಲೆಯು ಅಳುಕಿಸಿ ಹೋಗಬಹುದು," ಎಂಬುದು ನನಗೆ ಹೊಳೆಯುವದಿಲ್ಲೆಂದಲ್ಲ; ಆದರೆ ಅದರಿಂದ ಮನಸ್ಸಿನ ಮೇಲೆ ಉಂಟಾದ ಪರಿಣಾಮವು ಮಾತ್ರ ಸಹಜವಾಗಿ ನಾಶವಾಗದು! ನೀವೆ ಲ್ಲರು ಏನೇ ಅನ್ನಲೊಲ್ಲಿರೇಕೆ, ನಾನು ಮಾತ್ರ ಅದು ತೀರ ಅನುಚಿತವಾದ್ದೆಂದು ಸ್ಪಷ್ಟವಾಗಿ ಹೇಳದಿರಲಾರೆನು!

"ನಾವೆಲ್ಲರು ಅಲ್ಲ—ನಾನೊಬ್ಬನು ಮಾತ್ರ ವಿರುದ್ಧ ಮತದವನಿರುವೆನು. ರಂಗನು ಕೆನ್ನೆಗೆ ಕೊಟ್ಟು ನುಗಿಸಿ ಬಿಟ್ಟು ಪ್ರಾಯಶ್ಚಿತ್ತವನ್ನು ವಿಧಿಸಿದ್ದಾನೆ; ಆದರೆ ಇವನು ಹಾಗೆ ಗೊಂದಲವೆಬ್ಬಿಸುವ ಮೊದಲು ವೇಣುಗೋಪಾಲಾಚಾ ರ್ಯರ ಮಗಳು ಪತಿಮಂದಿರವನ್ನು ಸೇರಿದ ನಾಲ್ಕೆಂಟು ದಿನಗಳಲ್ಲಿಯೆ ಮೇಮ ಸಾಹೇಬಳಾಗಿ ಪರಿಣಮಿಸುವುದು ಸಾಧ್ಯವೆ? ಎಂಬುದನ್ನು ವಿಚಾರಿಸಬೇಕಾ ಗಿತ್ತು. ಏನೇ ಆಗಲಿ, ನಾನೀಗ ಕೊಂಚ ಅಡ್ಡಾಡಿ ಬರುವೆನು. ಅಣ್ಣ-ತಂಗಿ ಯರು ನಡೆಸಿದ್ದ ಅನರ್ಥದ ಪರಿಣಾಮವನ್ನು ವಿಚಾರಿಸುತ್ತ ಕುಳಿತುಕೊಳ್ಳಿರಿ."

ಈ ವರೆಗೆ ಸಿಟ್ಟಿಂದು ಮಾತಾಡದೆ ಕುಳಿತಿದ್ದ ರಂಗರಾಯನು ಮೋರೆ ಯೆತ್ತಿ ಭೀಮರಾಯನ ಕಡೆಗೆ ನೋಡಿ: 'ಎಲ್ಲಿಗೆ ಹೋಗುವೆ?' ಎಂದು ಕೇಳಿದನು.'

"ನಿನ್ನ ಹೆಂಡತಿಯು ನನಗೆ ತೀರ ಹೊಸಬಳು. ಅವಳ ಪರಿಚಯವನ್ನು ಮಾಡಿಕೊಳ್ಳಬೇಕಾಗಿದೆ. ಪುರಾಣಮತಾಭಿಮಾನಿನಿಯಾದ ಅವಳು ನನ್ನೊಡನೆ ಮಾತಾಡುವಳೊ-ಇಲ್ಲವೊ ಪರೀಕ್ಷಿಸುವೆನು. ಸಾಧ್ಯವಿರುವ ಎಲ್ಲ ಪ್ರಯತ್ನ ಗಳನ್ನು ಮಾಡಿ ಪರಿಚಯವು ಮಾಡಿಕೊಳ್ಳುವೆನು," ಎಂದು ಭೀಮರಾಯನು

ಹೊರಟನು. ಭಾಮಿನಿಯಿದ್ದ ಕೋಣೆಯ ಬಾಗಿಲ ಬಳಿಯಲ್ಲಿ ನಿಂತು: "ತಂಗಿ, ಎಂದು ಬಂದೆ? ಎಲ್ಲವೂ ಕ್ಷೇಮಕರವಷ್ಟೆ?" ಎಂದು ಕೇಳಿದನು. ಭಾಮಿನಿಯು ಕೆಲಸದಲ್ಲಿ ತೊಡಗಿದ್ದಳು. ರಾಮನು ಹತ್ತಿರಿದ್ದು ತಾಯಿಯ ಕೆಲಸವು ಬೆಳೆಯುವಂತೆ ಮಾಡುತಲಿದ್ದನು. ಭಾಮಿನಿಯು ಮೋರೆದಿರುವಿ ನೋಡಿದಳು. ಅಪರಿಚಿತ ಮನುಷ್ಯನು ಒಮ್ಮೆಲೆ ಹೀಗೆ ಮಾತಿಗೆ ಪ್ರವೃತ್ತನಾಗಿರುವುದನ್ನು ನೋಡಿ ಕೊಂಚ ವಿಸ್ಮಯ ಹೊಂದಿದಳು. ಮಾಡುತ್ತಿರುವ ಕೆಲಸನ್ನು ತಡೆದಿರಿಸಿ, ಎದ್ದು ನಿಂತಳು. ರಾಮನು: "ಅವ್ವಾ, ಮಾವನು" ಎಂದು ಹೇಳಿದನು. ಭಾಮಿನಿಯು ಆಗಂತುಕನು ಯಾರಾಗಿರಬೇಕೆಂಬುದನ್ನು ಊಹಿಸಿದಳು. "ಒಳಗೆ ಬರ್ರಿ. ಅಲ್ಲಿ ಮಣೆಯಿದೆ. ಕುಳಿತುಕೊಳ್ಳಿರಿ," ಎಂದು ಹೇಳಿದಳು. ಆ ಕೋಣೆಯಲ್ಲಿ ಎರಡು ಪೆಟ್ಟಿಗೆಗಳಿದ್ದುವು. ಅವುಗಳ ಬಾಗಿಲಗಳು ತೆರೆದಿದ್ದವು; ಒಳಗೆ ಏನೂ ಇರಲಿಲ್ಲ. ಮುಂಭಾಗದಲ್ಲಿ ಕೋಟು-ಜಾಕೀಟು-ಶರ್ಟ-ಕಾಲಚೀಲ-ಕಾಲರ ಮೊದಲಾದವುಗಳ ರಾಶಿಯು ಬಿದ್ದಿತ್ತು. ಭೀಮರಾಯನು ಭಾಮಿನಿಯು ತೋರಿದ ಮಣೆಯ ಮೇಲೆ ಕುಳಿತು: "ನೀನಿದೇನ ಮಾಡುತ್ತಿರುವೆ?" ಎಂದು ಕೇಳಿದನು.

ರಾಮನು ಒಟ್ಟಿಯ ರಾಶಿಯಲ್ಲಿಯ ಒಂದು ಜೋಡು ಕಾಲಚೀಲವನ್ನು ಹೊರದೆಗೆದು: "ಅವ್ವಾ, ಇಲ್ಲಿ ನೋಡು; ಮತ್ತೊಂದು ಜೋಡು ಕಾಲಚೀಲವು ಸಿಕ್ಕಿದೆ. ಬಹಳ ಹರಿದಿಲ್ಲ. ಇಲ್ಲಿ ಒತ್ತಟ್ಟಿಗೆ ತುಸ ಹರಿದದೆ," ಎಂದು ಹೇಳಿ, ಆ ಕಾಲಚೀಲಗಳನ್ನು ಭಾಮಿನಿಯ ಕೈಯಲ್ಲಿ ಕೊಟ್ಟನು. ಭಾಮಿನಿಯು ಅವುಗಳನ್ನು ತಕ್ಕೊಂಡು ಬೇರೊಂದು ಕಡೆಯಲ್ಲಿರಿಸಿದಳು. ಭೀಮರಾಯನು ಭಾಮಿನಿಯ ಕಾರ್ಯಪದ್ಧತಿಯನ್ನು ಲಕ್ಷ್ಯವಿರಿಸಿ ನೋಡಿ ಆಶ್ಚರ್ಯಾನ್ವಿತನಾಗಿ: "ಈ ಒಟ್ಟಿಗಳನ್ನೇಕೆ ಹೊರದೆಗೆದಿರುವೆ? ಬಡಬಗ್ಗರಿಗೆ ದಾನಮಾಡಬೇಕೆಂದಿರುವೆಯಾ? ಇಲ್ಲವೆ ಹೊಲಸ ಹೊರಮಾಡುವ ಉದ್ದೇಶದಿಂದ ಹೀಗೀ ಕೆಲಸ ನಡಿಸಿರುವೆಯಾ?" ಎಂದು ಕೇಳಿದನು. 'ವಿದ್ಯೆಗಲಿಯದ ಗಾವಿಲ ಹೆಂಗುಸಾಗಿದ್ದ ಭಾಮಿನಿಯು ತನ್ನನ್ನು ನೋಡುತ್ತಲೆ ಲಜ್ಜೆಯಿಂದ ಮಾತಾಡದಿರುವಳು,' ಎಂದು ಭೀಮರಾಯನು ಮೊದಲೆ ತರ್ಕಿಸಿಟ್ಟಿದ್ದನು; ಆದರೆ ಭಾಮಿನಿಯ ಆಚರಣೆಯಿಂದ ಭೀಮರಾಯನ ತರ್ಕವು ಪುಸಿಯಾಯಿತು. ಭಾಮಿನಿಯು ಮೋರೆಯನ್ನು ಎತ್ತದೆ ಸಹಜದನಿಯಿಂದ: "ನಾನು ಇವುಗಳನ್ನು ದುರಸ್ತಿಗೆ ಕಳುಹಬೇಕೆಂದಿದ್ದೇನೆ ಇಲ್ಲಿ ನೋಡಿರಿ; ಕಾಲಚೀಲ

ಗಳು ಒಹಳವಾಗಿ ಬಿದ್ದುಕೊಂಡಿವೆ. ಅವುಗಳ ಏಪೇರಿಯನ್ನು ಮಾಡಿಸಿ ತರಿಸಿ ವ್ಯವಸ್ಥೆಯಿಂದಿಟ್ಟುಕೊಂಡರೆ, ಇನ್ನು ಹತ್ತುವರ್ಷಗಳ ವರೆಗೆ ಕಾಲು ಚೀಲಗಳನ್ನು ಕೊಳ್ಳದಿದ್ದರೂ ನಡೆಯುವಂತಿದೆ,'' ಎಂದು ನುಡಿದಳು.

ಭೀಮರಾಯನು ಕ್ಷಣಕಾಲ ನೀರವವಾಗಿದ್ದು ಬಳಿಕ ಮಾತಾಡಹತ್ತಿದನು: "ತಂಗೀ, ಈಗ ಇಲ್ಲಿ ಮತ್ತೆ ಯಾರೂ ಇಲ್ಲ ನಾನು ಈ ಏಕಾಂತ ಸಮಯದಲ್ಲಿ ಅವಸರದಿಂದ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ನೀನು ನಿನ್ನ ನಾದಿನಿಯನ್ನು ನೋಡಿ ನನ್ನ ಸ್ವಭಾವದ ಊಹೆಮಾಡಬಯಿಸಬೇಡ; ಹಾಗು ಬಹಿರಂಗದ ಉಡಿಗೆ-ತೊಡಿಗೆಗಳನ್ನೂ ಆಚಾರ-ವ್ಯವಹಾರಗಳನ್ನೂ ನೋಡಿ, ನನ್ನನ್ನು ಫಿರಂಗಿಯೆಂದು ನಿಶ್ಚಯಿಸಬೇಡ. ನಾನು ನಿಜವಾಗಿಯೂ ಕರ್ನಾಟಕದ ಬ್ರಾಹ್ಮಣನು ಯಾರಾದರೂ ಸೋಮೇಶ್ವರದಲ್ಲಿ ಸ್ನಾನಮಾಡಿ ಬಂದಿರುವರೆಂಬ ಸುದ್ದಿಯನ್ನು ಕೇಳಿದ ಕೂಡಲೆ, ಭಾವಿಕತನದ ಪರಮಾವಧಿಯಾಯಿತೆಂದು ಭಾವಿಸಿ, ಅವರನ್ನು ಹೊಡೆಯ ಹೋಗುವವನು ನಾನಲ್ಲವೆಂಬುದನ್ನು ನಿಶ್ಚಯವಾಗಿ ತಿಳಿದುಕೊಳ್ಳು.''

ಭಾಮಿನಿಯು ಪ್ರತಿಮಾತಾಡದಿದ್ದಳು ಭೀಮರಾಯನು ಮತ್ತೆ ಹೇಳತೊಡಗಿದನು:"ರಂಗರಾಯನು ರಾಮನನ್ನು ಹೊಡೆದದ್ದು ನಿಜ, ಆದರೆ ಇದರ ಎಲ್ಲ ಹೊರೆಯನ್ನು ರಂಗರಾಯನ ಮೇಲೆ ಹಾಕಬಯಿಸಬೇಡ. ಯಾಕೆಂದರೆ ಅವನು ಅಷ್ಟೊಂದು ಕ್ಷುಲ್ಲಕ ಮನಸ್ಸಿನವನಲ್ಲ ನಾನೂ ರಂಗರಾಯನೂ ಬಾಲ್ಯಸ್ನೇಹಿತರು. ನಾನವನ ಸ್ವಭಾವವನ್ನು ಚನ್ನಾಗಿ ಬಲ್ಲೆನು.''

ಭಾಮಿನಿಯು ಈ ಮಾತಿನ ಉತ್ತರವನ್ನೂ ಕೊಡಲಿಲ್ಲ ಸುಮ್ಮನೆ ನಿಂತಿದ್ದಳು. ಭೀಮರಾಯನು ಹೇಳ ಹತ್ತಿದನು:—"ತಂಗಿ, ಕುಳಿತುಕೊಳ್ಳು; ಹಿಡಿದಿದ್ದ ಕೆಲಸವನ್ನು ಮುಂದೆ ಸಾಗಿಸು. ನನ್ನ ಸಲುವಾಗಿ ನೀನು ನಿನ್ನ ಕೆಲಸದಲ್ಲಿ ವ್ಯತ್ಯಯ ತಂದುಕೊಳ್ಳುವದು ಬೇಡ" ತುಸ ಹೊತ್ತು ಸುಮ್ಮನಿದ್ದು ಮತ್ತೆ ಇಂತು ನುಡಿದನು:—"ತಂಗಿ, ಕುಶಲ ಹಸ್ತದಿಂದ ನಡೆದಿರುವ ನಿನ್ನ ಈ ವ್ಯವಸ್ಥಿತ ಕಾರ್ಯವನ್ನು ನೋಡಿ ನನಗೆ ಅತ್ಯಾನಂದವಾಗಿದೆ. ನಾನು ನಿನ್ನ ಈ ಮನೆಗೆಲಸವನ್ನು ನೋಡಿಕೊಂಡು ತುಸ ಮಟ್ಟಿಗಾದರೂ ಕಲಿತುಕೊಳ್ಳುವ ಆಶೆಯುಳ್ಳವನಾಗಿದ್ದೇನೆ.''

ಭಾಮಿನಿಯು ಕೆಳಗೆ ಕುಳಿತು ಮೆಲ್ಲನೆ ನಕ್ಕು ಇಂತು ನುಡಿದಳು:— "ಇವೆಲ್ಲ ಗೃಹಿಣಿಯರ ಕಾರ್ಯಗಳು. ಇಂಥವುಗಳನ್ನು ನೀವು ಕಲಿಯುವುದ

ರಿಂದ ಪ್ರಯೋಜನವೇನು?"

"ಇದರ ಉತ್ತರವನ್ನು ಇಂದು ಕೊಡಲಾರೆನು. ಇನ್ನೊಂದು ದಿನ ಹೇಳುವೆನು."

ಭಾಮಿನಿಯು ಮಾತಾಡದಿದ್ದು ತನ್ನ ಕೆಲಸವನ್ನು ಮುಂದೆ ಸಾಗಿಸಿದಳು. ಕೆಲ ಹೊತ್ತಿನ ಮೇಲೆ: "ಇವೆಲ್ಲ ಕೆಲಸಗಳು ದರಿದ್ರರು ಮಾಡತಕ್ಕವುಗಳು. ನಿಮ್ಮಂಥವರಿಗೆ ಇವುಗಳನ್ನು ಕಲಿತುಕೊಳ್ಳುವುದರಿಂದ ಉಪಯೋಗವಾಗದು" ಎಂದು ನುಡಿದಳು.

ಭೀಮರಾಯನು ನಿಟ್ಟುಸಿರ ಬಿಟ್ಟು ನುಡಿಯ ಹತ್ತಿದನು:—"ತಂಗಿ, ಬಹಿರಂಗದ ಬೆಡಗನ್ನು ನೋಡಿ ನೀನೂ ಮೋಸ ಹೋಗುವಿಯಾದರೆ, ಈ ಸಂಸಾರದಲ್ಲಿ ನಮ್ಮಂಥ ದುರ್ದೈವಿಗಳ ದುಸ್ಥಿತಿಯನ್ನು ತಿಳಿಯುವವರೇ ಇಲ್ಲವೆಂದೆನ್ನಬೇಕಾಗುತ್ತದೆ! ನನಗೆ ಕಲಿಸದಿದ್ದರೆ ಬಿಡು ನಾನು ನನ್ನ ತಂಗಿಯನ್ನು ದಿನಾಲು ನಿನ್ನ ಹತ್ತರ ಕಳುಹಿ ಕೊಡುವೆನು. ಅವಳಿಗೆ ಕಲಿಸು. ಅವಳು ನಿನ್ನ ಕಾರ್ಯ ಪದ್ಧತಿಯ ಕೆಲವಂಶಗಳನ್ನಾದರೂ ಕಲಿತುಕೊಂಡರೆ, ಅತ್ತೆಯ ಮನೆಯಲ್ಲಿ ಲೋಕಾಪರಕ್ಕೆ ಪಾತ್ರಳಾಗದಿರಳು."

ಭಾಮಿನಿಯು ಸುಮ್ಮನಿದ್ದಳು. ಭೀಮರಾಯನು ಮತ್ತೆ ಮಾತಾಡುವುದರಲ್ಲಿದ್ದನು. ಬೂಟುಕಾಲುಗಳ ಶಬ್ದವನ್ನು ಕೇಳಿ ಮೆಲ್ಲನೆ ಇಂತು ಹೇಳಿದನು:—"ಅವರೆಲ್ಲರು ಇಲ್ಲಿಗೆ ಬರುತ್ತಿರುವರು ಅವರಲ್ಲಿ ನನ್ನ ತಂಗಿಯೂ ಇದ್ದಾಳೆ. ನನ್ನ ಹೆಂಡತಿಯು ಹಾಗು ತಂಗಿಯು ವೇಷ-ಭೂಷಣಗಳ ಸಾದೃಶ್ಯವನ್ನು ನೋಡಿ, ಇಬ್ಬರ ಸ್ವಭಾವವೂ ಒಂದೇ ವಿಥವಾದುದೆಂದು ಭಾವಿಸಬೇಡ."

"ನಾನು ಅನ್ಯರ ಅಂತರಂಗವನ್ನೂ ಸರಿಯಾಗಿ ತಿಳಿದುಕೊಳ್ಳಬಹುದು." ಭಾಮಿನಿಯು ನಸುನಗೆಯಿಂದ ನುಡಿದಳು.

"ತಿಳಿದುಕೊಳ್ಳಬಹುದು ಯಾಕೆ? ನಿಶ್ಚಯವಾಗಿಯೂ ತಿಳಿಯಬಲ್ಲೆಯೆಂಬುದನ್ನು ನಾನು ಅರಿತಿರುವೆನು!"

---

## ೮

ಆಗಂತುಕರು ರಂಗರಾಯನೂ ಸುಭದ್ರೆಯೂ ಇವಳ ನಾದಿನಿಯಾದ ಸುಶೀಲೆಯೂ ಆಗಿದ್ದರು. ರಂಗರಾಯನೂ ಸುಭದ್ರೆಯೂ ಮುಂದೆ ಇದ್ದರು.

ಮೊದಲು ಕೋಣೆಯನ್ನು ಹೊಕ್ಕರು. ಸುಶೀಲೆಯು ಹಿಂದೆ ಇದ್ದಳು. ಇನ್ನು ಕೋಣೆಯಲ್ಲಿ ಕಾಲಿಡತಕ್ಕವಳಿದ್ದಳು. ಇಷ್ಟರಲ್ಲಿ ಭೀಮರಾಯನು ಇವಳಿಗೆ ಬೂಟುಗಳನ್ನು ತೆಗೆದಿರಿಸಿ ಒಳಗೆ ಬಾ, ಎಂದು ಸನ್ನೆಯು ಮಾಡಿ ಸೂಚಿಸಿದನು. ಸುಶೀಲೆಯು ಬೂಟುಗಳನ್ನು ಬಿಚ್ಚುವ ಕೆಲಸಕ್ಕೆ ತೊಡಗಿದಳು. ಸುಭದ್ರೆಯು ಹಿಂದಿರುಗಿ ನೋಡಿ ವಿಸ್ಮಯದಿಂದ ಪತಿಯನ್ನು ಕುರಿತು ಪ್ರಶ್ನೆ ಮಾಡಿದಳು:- "ಕಾರಣವೇನು?"

"ಬೂಟುಗಳನ್ನು ಬಿಚ್ಚಿಟ್ಟು ಬರುವುದರಲ್ಲಿ ದೋಷವೇನು? ಬೂಟುಗಳನ್ನು ಬಿಚ್ಚಿಟ್ಟರೆ ಕಾಲುಗಳಿಗೆ ಮುಳ್ಳು ನಡುವಂತಿಲ್ಲ; ಕೆಸರು ಹತ್ತುವಂತಿಲ್ಲ." ಭೀಮರಾಯನು ಹೇಳಿದನು.

"ಇದು ನನಗೆ ಗೊತ್ತಿದೆ! ನೀವು ಒಮ್ಮಿಂದೊಮ್ಮೆಲೆ ಹೀಗೆ ಸೂಚಿಸಲಿಕ್ಕೆ ಕಾರಣವೇನೆಂಬದನ್ನು ಮಾತ್ರ ನಾನು ವಿಚಾರಿಸಿದೆನು!" ಸುಭದ್ರೆಯು ನುಡಿದಳು.

"ನಿನ್ನ ಅತ್ತಿಗೆಯು ಭಾವಿಕಮನುಷ್ಯಳು. ಮೇಲಾಗಿ ನಿಮ್ಮಿಬ್ಬರಿಗಿಂತ ಹಿರಿಯಳು. ಹಿರಿಯರ ಹತ್ತಿರ ಹೋಗಬೇಕಾದರೆ, ಬರಿಗಾಲಿನಿಂದ ಹೋಗುವುದು ವಿಹಿತವು." ಭೀಮರಾಯನು ಹೇಳಿದನು.

ಸುಭದ್ರೆಯು ಪತಿಯ ಪಾದಗಳ ಕಡೆಗೆ ನೋಡಿದಳು. ಭೀಮರಾಯನು ಒಳಗೆ ಬರುವ ಮೊದಲು ಬೂಟುಗಳನ್ನು ಬಿಚ್ಚಿರಿಸಿ, ಒಳಗೆ ಹೊಕ್ಕಿದ್ದನು. ಸುಭದ್ರೆಯು ಗಂಡನ ಬರಿಗಾಲುಗಳನ್ನು ನೋಡಿ ಕೋಪಗೊಂಡಳು. ಇವಳ ಮೈಯೆಲ್ಲವೂ ಉರಿಯಹತ್ತಿತು: "ಹಿರಿಯರ ವಿಷಯದಲ್ಲಿಯ ನಿಮ್ಮ ಭಕ್ತಿ-ವಿಶ್ವಾಸಗಳು ಅಸಾಧಾರಣವಾದವುಗಳು! ಶ್ರದ್ಧೆಯು ಕೆಟ್ಟದ್ದಲ್ಲವಾದರೂ, ಅತಿರೇಕವಾದರೆ ಕೆಡಿಸದೆ ಬಿಡದು! ಇದು ಮಲಗುವ ಮನೆಯಾಗಿರದೆ, ದೇವಮಂದಿರವಾಗಿದ್ದರೆ, ನೀವಿಂದು ಪಂಚಗವ್ಯವನ್ನು ಸೇವಿಸದೆ ಒಳಗೆ ಕಾಲಿಕ್ಕುತ್ತಿದ್ದಿಲ್ಲ!" ಎಂದು ಸಂತಾಪಾತಿರೇಕದಿಂದುಚ್ಚರಿಸಿದಳು.

ಭೀಮರಾಯನು ಕಾಂತೆಯ ಕೋಪವನ್ನು ನೋಡಿ ನಕ್ಕು ಮಾತಾಡ ತೊಡಗಿದನು: "ಗೋಮಯವು ನನಗೆ ಸೇರುವುದಿಲ್ಲ. ಕಾರಣ ನಾನು ಪ್ರಸಂಗ ವಿಶೇಷದಲ್ಲಿಯೂ ಗೋಮಯವನ್ನು ತಿನಲಾರೆನು. ಮತ್ತೊಂದು ಮಾತೆಂದರೆ, ನಾನು ದೇವರ ನಾಮಸ್ಮರಣೆಯನ್ನೊಂದೂ ಮಾಡಿದವನಲ್ಲ. ಕಾರಣ ದೇವರಿಗೂ ನನಗೂ ಸಂಬಂಧವಿಲ್ಲ. ಹೀಗಿರಲು ನಿಷ್ಕಾರಣವಾಗಿ ದೇವಮಂದಿರವನ್ನು ಹೊಕ್ಕು ಉತ್ಪಾತವೆಬ್ಬಿಸಲಿಕ್ಕೆ ನಾನೆಂದೂ ಮನಸ್ಸು ಮಾಡುವವನಲ್ಲ."

ಬಳಿಕ ಭಾಮಿನಿಯ ಕಡೆಗೆ ನೋಡಿ: "ತಂಗೀ, ಈ ಮನೆಯಲ್ಲಿ ಒಂದು ದೊಡ್ಡ ಕಪಾಟು ಇತ್ತು. ಅದು ಇಂದು ಕಾಣದಾಗಿದೆ. ನೀನದನ್ನು ಬೇರೆ ಕಡೆಯಲ್ಲಿ ಇಡಿಸಿರುವೆಯೇನು?" ಎಂದು ಕೇಳಿದನು.

"ಅಹುದು. ಕಸ ಉಡುಗಿಸಲಿಕ್ಕೂ, ಸಾರಿಸಲಿಕ್ಕೂ ತೊಂದರೆಯಾಗುತ್ತಿತ್ತು. ಮಲಗುವ ಮನೆಯಲ್ಲಿ ಹಾಗೆ ಸಾಮಾನುಗಳನ್ನು ಹರವಿಕೊಂಡು, ಹೊಲಸಿಗೆ ಎಡೆಮಾಡಿಕೊಟ್ಟು, ಹುಳ-ಹುಪ್ಪಡಿಗಳ ವಾಸಕ್ಕೆ ಅನುವು ಮಾಡಿಕೊಡುವುದು ಒಳಿತಲ್ಲವೆಂದು ಆಲೋಚಿಸಿ, ಆ ಕಪಾಟನ್ನು ಹೊರಗೆ ಇರಿಸಿರುವೆನು............"

"ಮನೆಯಲ್ಲಿ ಕಪಾಟು ಇದ್ದರೆ, ಹೊಲಸಾಗುವುದೆ? ಕ್ರಿಮಿ-ಕೀಟಕಗಳಾಗುವವೆ?" ಸುಭದ್ರೆಯು ಉಪಹಾಸಸೂಚಕ ಸ್ವರದಿಂದ ಕೇಳಿದಳು.

ಭಾಮಿನಿಯು ಸುಭದ್ರೆಯ ಮೋರೆಯ ಮೇಲೆ ದೃಷ್ಟಿಯಿರಿಸಿ: "ತಂಗಿ, ಆಗದೇನು? ಮೇಲೆ ಮೇಲೆ ನೋಡುವವಂಗೆ ಕಾಣದಿದ್ದರೂ, ಕಪಾಟಿನ ಬುಡದಲ್ಲಿ ಹೊಲಸೂ ಹುಳ-ಹುಪ್ಪಡಿಗಳೂ ಇರುವುದು ಸಹಜವಾದ್ದು," ಎಂದು ನುಡಿದಳು.

ಸುಭದ್ರೆಯು ಪ್ರತಿಮಾತಾಡುವುದರಲ್ಲಿದ್ದಳು; ಆದರೆ ಪತಿಯ ಪ್ರಬಲ ಸ್ವರವನ್ನು ಕೇಳಿ ಸುಮ್ಮನಾದಳು. ಭೀಮರಾಯನು ಉತ್ಸಾಹದಿಂದ ಮಾತಾಡ ಹತ್ತಿದನು: "ತಂಗಿ, ಸೂಕ್ಷ್ಮರೀತಿಯಿಂದ ನೋಡುವುದು ನಮಗೆ ಬೇಡ. ಮರೆಯಲ್ಲಿ ಎಷ್ಟೇ ಹೊಲಸಿದ್ದರೂ, ಕ್ರಿಮಿ-ಕೀಟಕಗಳು ಚಿರನಿವಾಸಭೂಮಿಯನ್ನು ಮಾಡಿಕೊಂಡಿದ್ದರೂ ನಮಗೆ ಹಾನಿಯಿಲ್ಲ! ಯಾಕೆಂದರೆ ಅವು ನಮ್ಮ ದಿವ್ಯದೃಷ್ಟಿಗೆ ಗೋಚರಿಸವು! ರಂಗ, ನಾನನ್ನುವ ಮಾತು ನಿಜವಷ್ಟೆ?"

ರಂಗರಾಯನು ಮಾತಾಡಬಯಿಸಲಿಲ್ಲ. ಸುಭದ್ರೆಯ ಕೋಪಕ್ಕೆ ಅಳತೆಯಿಲ್ಲದಾಯಿತು. ಆದರೂ ಇವಳು ತನ್ನ ಕೋಪವನ್ನು ತಡಕೊಂಡು ವಾದವಿವಾದ ಪ್ರವೃತ್ತಿಯನ್ನು ಬಿಗಿಹಿಡಿದುಕೊಂಡು ಮೌನದಿಂದಿದ್ದಳು. ಈ ದಂಪತಿಗಳು ಪರಸ್ಪರರಲ್ಲಿ ನಿಜವಾದ ಪ್ರೇಮಭಾವನೆಯುಳ್ಳವರಾಗಿದ್ದರು; ಆದರೆ ಒಹಿರಂಗದ ಆಚಾರ-ವಿಚಾರಗಳಲ್ಲಿ, ಕ್ರಿಯಾ-ಕಲಾಪಗಳಲ್ಲಿ ಮತೈಕ್ಯವುಳ್ಳವರಾಗಿರಲಿಲ್ಲ. ಕಾರಣ ಸಾಮಾನ್ಯ ಕಾರಣದ ಸಲುವಾಗಿ ಆಗಾಗ್ಗೆ ವಾದ-ವಿವಾದ ಪ್ರವೃತ್ತರಾಗುತ್ತಿದ್ದರು. ಕಲಹಿಸುತ್ತಿದ್ದರು. ಅನ್ಯರ ಸಮ್ಮುಖದಲ್ಲಿ ನಡೆದ ವಾಗ್ಯುದ್ಧದಲ್ಲಿ ಪರಾಜಯವನ್ನು ಸ್ವೀಕರಿಸುವುದು ಸುಭದ್ರೆಯ

ಸ್ವಭಾವಕ್ಕೆ ತೀರ ವಿಪರೀತವಾಗಿತ್ತು. ಭಾರ್ಯೆಯ ಈ ಸ್ವಭಾವವನ್ನರಿತಿದ್ದ ಭೀಮರಾಯನು ಹೆಂಡತಿಯೊಡನೆ ವಾದ-ವಿವಾದಕ್ಕೆ ತೊಡಗಿದಾಗ 'ಹಗ್ಗವನ್ನು ಹರಿಯುವವರೆಗೆ ಜಗ್ಗಲಾಗದು' ಎಂಬನಾಣ್ಣುಡಿಯಂತೆ ಪ್ರೋಕ್ತವಿಚಾರವನ್ನವಲಂಬಿಸಿ ತಾನೇ ಪರಾಜಯವನ್ನು ಸ್ವೀಕರಿಸಲಿಕ್ಕೆ ಸಿದ್ಧನಾಗುತ್ತಿದ್ದನು; ಇಲ್ಲವೆ ವಾದ-ವಿವಾದವನ್ನು ಅರ್ಧಕ್ಕೇನೆ ನಿಲ್ಲಿಸಿ ಯುದ್ಧಮಾಡಲಾರದ ದಂಡಾಳುಗಳು ಸಮರಭೂಮಿಯಿಂದ ಕಾಲ್ತೆಗೆಯುವಂತೆ ಪಲಾಯನ ಮಂತ್ರವನ್ನು ಜಪಿಸುತ್ತಿದ್ದನು; ಆದರೆ ಭೀಮರಾಯನು ಇಂದು ಆ ಪ್ರವೃತ್ತಿಗೊಳಗಾಗಲಿಲ್ಲ. ಸುಭದ್ರೆಯು ಪತಿಯ ಸ್ಥಿರತೆಯನ್ನು ಭಾವಿಸಿ ತಿಳಕೊಂಡವಳಾಗಿ, ತಾನೇ ಶಾಂತತೆಯನ್ನವಲಂಬಿಸುವುದನ್ನು ನಿರ್ಧರಿಸಿಕೊಂಡಳು.

ಭೀಮರಾಯನು ಇಂದು ತುಂಬ ನಿಷ್ಠುರನಾಗಿದ್ದನು. ಪರರ ದೋಷಗಳನ್ನೆತ್ತಿ ಕಟುವಚನಗಳನ್ನಾಡುವದು ಸುಭದ್ರೆಯ ಸ್ವಭಾವವಾಗಿ ಹೋಗಿತ್ತು. ಇವಳು ಎಲ್ಲಿ ಹೋದರೂ ತನ್ನ ಈ ಕಾಯಕವನ್ನು ಬಿಡುತ್ತಿದ್ದಿಲ್ಲ ಸುಭದ್ರೆಯು ಈ ಮೊದಲು ಪತಿಯ ಸಮಕ್ಷಮದಲ್ಲಿ ಎಷ್ಟೋ ಸಲ ಅನ್ಯರನ್ನು ಆಡಿಕೊಳ್ಳುವ ಅಶಿಷ್ಟವ್ಯವಹಾರವ ಮಾಡಿದ್ದರೂ, ಭೀಮರಾಯನ ಇಷ್ಟೊಂದು ಕೋಪಗೊಂಡಿರಲಿಲ್ಲ ಯಾಕಂದರೆ, ಮುನ್ನಿನ ಪ್ರಸಂಗಗಳಲ್ಲಿ ಸುಭದ್ರೆಯ ನಿಂದೆಯ ವಿಷಯಗಳಾಗಿದ್ದ ವ್ಯಕ್ತಿಗಳಿಗೆ ವಿಶೇಷ ಹಾನಿಯೊದಗುವಂತಿರಲಿಲ್ಲ; ಆದರೆ ಈಗಿನ ಪ್ರಸಂಗವು ಹಾಗಿರಲಿಲ್ಲ. ಸುಭದ್ರೆಯು ಪ್ರಥಮ ದರ್ಶನ ಸಮಯದಿಂದ ಈವರೆಗೆ ಭಾಮಿನಿಯ ನಿಂದೆಗೆ ಉದ್ಯುಕ್ತಳಾಗಿದ್ದಳು; ಭಾಮಿನಿಯ ಅಹಿತವನ್ನು ಮಾಡುವುದಕ್ಕೆ ಬದ್ಧಕಂಕಣಳಾಗಿದ್ದಳು. ಪತಿಸುಖದಿಂದ ವಂಚಿತಳಾಗಿದ್ದ ಭಾಮಿನಿಯು ಬಹು ದಿನಗಳ ತರುವಾಯ ಕೇವಲ ದೈವಾನುಕೂಲತೆಯಿಂದ ಗಂಡನ ಮನೆಯಲ್ಲಿ ಕಾಲಿಕ್ಕಿದ್ದಳು; ಪತಿಯ ಹೃದಯವನ್ನು ಆಕ್ರಮಿಸುವದರಲ್ಲಿದ್ದಳು ಆದರೆ ಸುಭದ್ರೆಯು ಭಾಮಿನಿಯ ಈ ಸುಖಪ್ರಾಪ್ತಿಗೆ ಮೊದಲಿನಿಂದಲೂ ಅಡ್ಡಿಯನ್ನೊಡ್ಡಿದ್ದಳು; ಭಾಮಿನಿಯನ್ನು ಪತಿಗೃಹದಿಂದ ಹೊರದೂಡಿಸುವ ದುರುದ್ದೇಶ ಪ್ರೇರಿತಳಾಗಿದ್ದಳು. ಇದು ಭೀಮರಾಯನಿಗೆ ಸಮ್ಮತವಿರಲಿಲ್ಲವಷ್ಟೇ ಅಲ್ಲ; ಹೆಂಡತಿಯ ಈ ದುರ್ವ್ಯವಹಾರದಿಂದ ಇವನ ಹೃದಯವು ದುಃಖದಿಂದಲೂ ಕೋಪದಿಂದಲೂ ತುಂಬಿಹೋಗಿತ್ತು. ಮತ್ತೊಂದು ಮಾತೇನೆಂದರೆ, ಭೀಮರಾಯನು ತನ್ನ ಹೆಂಡತಿಯ ಹಾಗು ಭಾಮಿನಿಯ ಯೋಗ್ಯತೆಯನ್ನು ಒರೆಗೆ ಹಚ್ಚಿ ಪರೀಕ್ಷಿಸಿದ್ದನು; ಹಾಗು ಭಾಮಿನಿಯ ವಾದ

ಧರ್ಮಿಣಿಯ ಯೋಗ್ಯತೆಯೂ ತನ್ನ ಹೆಂಡತಿಯಲ್ಲಿಲ್ಲವೆಂದನ್ನು ಗೊತ್ತುಮಾಡಿಕೊಂಡಿದ್ದನು. ಕಾರಣ ಭೀಮರಾಯನು ಇಂದು ತನ್ನ ಮಡದಿಯ ಅಪರಾಧವನ್ನು ಕ್ಷಮಿಸಲಾರದವನಾಗಿದ್ದನು.

ಸುಭದ್ರೆಯು ವಿದ್ಯಾಭೂಷಿತೆಯು. ಸುಧಾರಕಳು. ಈ ವರೆಗೂ ಗಂಡನ ಮೇಲೆ ತನ್ನ ಟಬರು ನಡಿಸುತ್ತ ಬಂದವಳು. ಭೀಮರಾಯನು ಹೆಂಡತಿಯ ದೋಷವನ್ನು ಸ್ಪಷ್ಟವಾಗಿ ಸೂಚಿಸಿ, ಅವಳ ಕಿವಿ ಹಿಂಡಲಸಮರ್ಥನಾಗಿದ್ದನು. ಕಾರಣ ಇವನು ಇಂದು ತನ್ನ ಕೋಪವನ್ನು ಒಂದು ಬಗೆಯಿಂದ ಪ್ರಕಟಿಸಿ, ತನ್ನ ಹೆಂಡತಿಗೆ ಪಶ್ಚಾತ್ತಾಪವುಂಟಾಗುವಂತೆ ಮಾಡಬೇಕೆಂದು ಆಲೋಚಿಸಿದ್ದನು.

"ಸುಶೀಲೆ, ನೀನು ದಿನಾಲು ನಿನ್ನ ಈ ಅಕ್ಕನ ಹತ್ತರ ಬರುತ್ತಿರು. ಇವಳ ಕಾರ್ಯಪದ್ಧತಿಯನ್ನು ಅವಲೋಕಿಸಿ ಕಲಿತುಕೊಳ್ಳು. ನೀನು ಹೀಗೆ ಮಾಡಿದೆಯಾದರೆ, ಮುಂದೆ ಅತ್ತೆಯ ಮನೆಯಲ್ಲಿ ನಿಶ್ಚಯವಾಗಿಯೂ ಸುಖವನ್ನು ಹೊಂದುವೆ" ಭೀಮರಾಯನು ತನ್ನ ತಂಗಿಯನ್ನುದ್ದೇಶಿಸಿ ನುಡಿದನು.

ಸುಶೀಲೆಯು ನಗೆಮೋರೆಯಿಂದ ಸುಮ್ಮನಿದ್ದಳು. ಭಾಮಿನಿಯು ಮೋರೆಯನ್ನು ಮೇಲೆತ್ತದೆ ಇಂತು ಮಾತನಾಡಿದಳು: "ಹೀಗೆನ್ನಬೇಡಿರಿ ಸುಶೀಲೆಯು ನನ್ನ ಅನುಕರಣಮಾಡಿ ಉಪಯೋಗವಿಲ್ಲ. ಇವಳು ನನ್ನಂತೆ ಆಚರಿಸಹತ್ತಿದರೆ, ನಿಮ್ಮ ಸುಧಾರಕ ಸಮಾಜವು ಇವಳಿಗೆ ಬಹಿಷ್ಕಾರವ ಹಾಕದೆ ಬಿಡದು!"

"ಸಮಾಜವು ಏನೇ ಮಾಡಲಿ, ಗೃಹಸೌಖ್ಯಕ್ಕೆ ಬಾಧೆಬಾರದು. ಇವಳು ನಿನ್ನ ಕಾರ್ಯಕುಶಲತೆಯನ್ನು ಕಲಿತಿಟ್ಟರೆ, ಭವಿಷ್ಯತ್ಕಾಲದ ದಾಂಪತ್ಯ ಜೀವನವು ಒಳ್ಳೆ ಸುಖಮಯವಾಗುವುದೆಂದು ನಾನು ಪಣಮಾಡಿ ಹೇಳಬಲ್ಲೆನು!" ಭೀಮರಾಯನು ಆವೇಶವಿಂದ ಮಾತಾಡಿದನು.

ಈವರೆಗೆ ಸುಮ್ಮನಿದ್ದ ರಂಗರಾಯನು ಮಾತಾಡಲಿಕ್ಕೆ ಮುಂದಾದನು. ಇವನು ತಂಗಿಯ ಮೋರೆಯ ಕಡೆಗೆ ನೋಡಿ ಚೇಷ್ಟೆಮಾಡುವ ಉದ್ದೇಶದಿಂದ: "ಈ ವರೆಗೆ ಸಹಜವಾಗಿ ಮಾತಾಡಿದ್ದೇ ಸಾಕಾಗಿದೆ. ಇನ್ನು ಪಣಕಟ್ಟಿ ಮಾತಾಡುವ ಪ್ರಯೋಜನವಿಲ್ಲವಾಗಿದೆ," ಎಂದು ನುಡಿದನು.

ಭೀಮರಾಯನು ಈ ಮಾತಿನ ಕಡೆಗೆ ಲಕ್ಷ್ಯವಿರಿಸದೆ ಮುಂದೆ ಮಾತಾಡಹತ್ತಿದನು: "ಸುಶೀಲೆಯು ಇಂದಿನ ನಿನ್ನ ಇದೊಂದೇ ಕೆಲಸವನ್ನು ಕಲಿತಿಟ್ಟುಕೊಂಡರೂ ಎಷ್ಟೋ ಪ್ರಯೋಜನವನ್ನು ಹೊಂದಬಹುದಾಗಿದೆ. ದಿನಾಲು ಹೊಸಹೊಸ ಕಾಲುಚೀಲಗಳನ್ನು ಕೊಳ್ಳಹೋಗುವ ಪತಿಯ ಶ್ರಮವನ್ನೂ ಹಣ,

ವನ್ನು ಉಳಿಸಬಹುದಾಗಿದೆ."

ಸುಭದ್ರೆಯು ಈ ವರೆಗೆ ಸುಮ್ಮನಿದ್ದಳು. ಇನ್ನು ತಡೆಯದಾದಳು. ಇವಳು ಹೊಟ್ಟೆಯೊಳಗಿನ ಕೋಪವನ್ನು ಹೊಟ್ಟೆಯಲ್ಲಿಯೇ ಮುಚ್ಚಿಟ್ಟುಕೊಂಡು ಮೋರೆಯ ಮೇಲೆ ನಗೆಯುಲಕ್ಷಣವನ್ನು ತಂದುಕೊಂಡು ಮಾತಾಡಹತ್ತಿದಳು: "ಭವಿಷ್ಯತ್ಕಾಲದ ಸುಶೀಲೆಯ ಸಂಸಾರದಲ್ಲಿ ಇವಳಿಗೆ ಪತಿಯ ಕಾಲುಚೀಲಗಳನ್ನು ದುರಸ್ತಮಾಡುವ ಸುಸಂಧಿಯು ದೊರೆಯಲಿಕ್ಕಿಲ್ಲ ಒಂದು ವೇಳೆ ದೊರೆತು ಇವಳು ಕಾಲುಚೀಲಗಳನ್ನು ದುರಸ್ತ ಮಾಡಿಟ್ಟರೂ ಪತಿರಾಯನು ಆ ಕಾಲು ಚೀಲಗಳನ್ನು ಹಾಕಿಕೊಳ್ಳಲಿಕ್ಕೆ ಒಪ್ಪಿಕೊಳ್ಳಲಿಕ್ಕಿಲ್ಲ ಹೀಗಾದರೆ, ಸುಶೀಲೆಯು ಈ ವಿದ್ಯೆಯನ್ನು ಕಲಿತುಕೊಂಡು ಮಾಡುವದೇನು? ಮುಂದಾಗುವುದನ್ನು ಕಂಡುಹಿಡಿಯುವದು ಹೇಗೆ? ಅನಿಶ್ಚಿತವಾದ ಭವಿಷ್ಯತ್ಕಾಲದ, ಬೆನ್ನು ಹತ್ತಿ ಈಗಿನಿಂದಲೂ ಶ್ರಮಪಡುವದು ಸಮಂಜಸವೇ?"

"ಕಣ್ಣು, ಕಿವಿ ಮುಂತಾದ ಅವಯವಗಳು ಜಾಗ್ರತವಾಗಿದ್ದರೆ ಮುಂದಾಗುವದನ್ನು ಕಂಡುಹಿಡಿಯುವದು ಅಶಾಧ್ಯವಲ್ಲ ಕುಶಲನಾದ ನಾವಿಕನು ಮೇಲಿನ ನೀರನ್ನು ನೋಡಿ ಮಹಾಸಾಗರದ ನೆಲೆಯನ್ನು ತರ್ಕಿಸುವನು; ಊಹೆಗೆ ಅನುಕೂಲವಾಗಿ ಹಡಗವನ್ನು ನಡಿಸಿಕೊಂಡು ಹೋಗಿ ಸುರಕ್ಷಿತ ರೀತಿಯಿಂದ ದಂಡೆಯನ್ನು ಮುಟ್ಟುವನು. ನಿನ್ನ ಅತ್ತಿಗೆಯು ಈ ಸಂಸಾರ ನೌಕೆಯಲ್ಲಿ ಕಾಲಿಡುತ್ತಲೆ ತಳದ ಛಿದ್ರವನ್ನು ಕಂಡು ಹಿಡಿದು, ಸಾವಧಾನತೆಯಿಂದ ವರ್ತಿಸಿ ಆ ತೂತನ್ನು ಮುಚ್ಚುವುದರಲ್ಲಿದ್ದಾಳೆ. ಇದಕ್ಕಾಗಿ ನೀನು ನಿನ್ನ ಈ ಅತ್ತಿಗೆಗೆ ಧನ್ಯವಾದಗಳನ್ನು ಅರ್ಪಿಸಲಿಕ್ಕೆ ಬೇಕು. ಇದಕ್ಕಾಗಿ ರಂಗನು ಕೋಟಿ ಧನ್ಯವಾದಗಳನ್ನರ್ಪಿಸಿದರೂ ಸಾಲದು." ಭೀಮರಾಯನೆಂದನು.

ಭಾಮಿನಿಯು ಅತಿಶಯ ನಾಚಿಕೊಂಡವಳಾಗಿ ವಿನಯದಿಂದ ಹೇಳಹತ್ತಿದಳು:—"ಪತಿರಾಯನ ಸ್ಥಿತಿಗತಿಗಳನ್ನರಿತು ತಕ್ಕ ಏರ್ಪಾಟುಗಳನ್ನು ಮಾಡುವುದು ಗೃಹಿಣಿಯ ಕರ್ತವ್ಯವು. ನಾನು ನನ್ನ ಈ ಕರ್ತವ್ಯವನ್ನು ಪಾಲಿಸುವುದರಲ್ಲಿದ್ದೇನೆ. ಇದರಲ್ಲಿ ಧನ್ಯವಾದಕ್ಕೆ ಎಡೆಯಿಲ್ಲ"

"ಧನ್ಯವಾದಕ್ಕೆ ಆಸ್ಪದವಿರದಿದ್ದರಿಲ್ಲ. ಕೈ ಹಿಡಿದ ಹೆಂಡತಿಗೆ ಅಪಮಾನ ಮಾಡಬೇಕೆಂದಿರುವ ತನ್ನ ಉದ್ದೇಶವ ಸಿದ್ಧಿಗಾದರೂ ಆಸ್ಪದವಿದೆಯಷ್ಟೆ? ಮತ್ತೊಂದು ಮಾತೇನೆಂದರೆ, ಕೆಲವರಿಗೆ ದಾಸ್ಯವೃತ್ತಿಯವರನ್ನು ಕಂಡರೆ ಪರಮಾನಂದವಾಗುವುದು. ಇವರು ಆ ದಾಸೀ ವೃತ್ತಿಯ ಜನರನ್ನು ತಥ

ಮುಖರಾಗಿ ಹೊಗಳಲಿಕ್ಕೆ ಹಿಂದೆಗೆಯರು!'' ಸುಭದ್ರೆಯು ಮಾತಾಡಿದಳು.

ಭಾಮಿನಿಯು ಮೋರೆಯೆತ್ತಿ ಮಾತಾಡಹತ್ತಿದಳು:—''ತಂಗಿ, ನೀನು ತಪ್ಪುತ್ತಿರುವೆ! ಪತಿಯ ಮನೋವೃತ್ತಿಯನ್ನರಿತು ಸರಿಯಾದ ವ್ಯವಸ್ಥೆ ಮಾಡುವುದಕ್ಕೆ ದಾಸ್ಯವೃತ್ತಿಯೆನ್ನಲಿಕ್ಕಾದೀತೆ?''

''ಅನ್ನಲಿಕ್ಕಾಗದು. ಜಗತ್ತಿನೊಳಗಿನ ಸುಧಾರಿಸಿದ ಯಾವ ಮನುಷ್ಯನೂ ಗೃಹಿಣಿಯ ಈ ಕರ್ತವ್ಯಪಾಲನೆಗೆ ಹೀನವೃತ್ತಿಯೆಂದು ಹೆಸರಿಡನು. ಒಂದು ವೇಳೆ ನಿನ್ನ ನಾದಿನಿಯ ದೃಷ್ಟಿಯಿಂದ ಇದು ಹೀನ ಕಾರ್ಯವೇ ಆಗಿದ್ದರೆ, ಪತಿಯ ಸಮ್ಮುಖದಲ್ಲಿ ಅವನ ಸಾಧ್ವಿಯಾದ ಸತಿಯನ್ನು ಸದಾ ಹೀಯಾಳಿಸುತ್ತಿರುವುದು ಹೃದಯದ ಎಂಥಹ ಪ್ರವೃತ್ತಿಯೆಂಬುದನ್ನು ವಿಚಾರಿಸಿ ತಿಳಿದುಕೊಳ್ಳು'' ಭೀಮರಾಯನು ನುಡಿದನು.

ಸುಭದ್ರೆಯ ಮುಖದಿಂದ ಮಾತುಗಳು ಹೊರಡದಾದುವು. ಇವಳು ಹುಚ್ಚಿಯಂತೆ ಒಮ್ಮೆ ಪತಿಯ ಮುಖವನ್ನು ನೋಡಿದಳು. ಮತ್ತೊಮ್ಮೆ ರಂಗರಾಯನ ಮುಖದ ಕಡೆಗೆ ನೋಡಹತ್ತಿದಳು. ತನ್ನ ಪತಿಯು ಇಷ್ಟು ಜನರ ಸಮಕ್ಷಮ ಹೀಗೆ ವಾಗ್ಬಾಣಗಳ ಮಳೆಗರೆಯಬಹುದೆಂಬದನ್ನು ಅವಳು ಕನಸು-ಮನಸುಗಳಲ್ಲಿ ಸಹ ಭಾವಿಸಿದವಳಲ್ಲ ಮೊದಲು ಇವಳಿಗೆ ಕೊಂಚ ವಿಸ್ಮಯವಾಯಿತು. ಬಳಿಕ ಆ ಸ್ಥಳವನ್ನು ಸಂತಾಪಾತಿರೇಕವು ವ್ಯಾಪಿಸಿತು. ಶೋಕವು ಅನಾವರವಾಯಿತು. ಅವಳು ಕಣ್ಣೀರು ಸುರಿಸುತ್ತ:-''ಅಣ್ಣಾ, ಇನ್ನು ನಾನು ನಿನ್ನೀ ಮನೆಗೆ ಬರಲಾರೆನು! ನಾನಿನ್ನು ನನ್ನೀ ಜನ್ಮಗೃಹಕ್ಕೆ ಕೊನೆಯ ನಮಸ್ಕಾರ ಮಾಡಿ ಹೊರಡುವೆನು!'' ಎಂದು ನುಡಿದಳು.

ರಂಗರಾಯನು ವ್ಯಾಕುಲಗೊಂಡನು. ಭಾಮಿನಿಯು ಕೈಯೊಳಗಿನ ಕೆಲಸವನ್ನು ಚಲ್ಲಿಕೊಟ್ಟು ಅವಸರದಿಂದ ಎದ್ದು ಬಂದು ಸುಭದ್ರೆಯ ಕೈ ಹಿಡಿದು: ''ತಂಗಿ, ನಾವೀರ್ವರೂ ನಿನ್ನ ಮನಸ್ಸಿಗೆ ಹತ್ತುವಂಥ ಯಾವ ಕೆಟ್ಟ ಮಾತುಗಳನ್ನೂ ಆಡಿದವರಲ್ಲ,'' ಎಂದು ನುಡಿದಳು.

ಭೀಮರಾಯನು ಈ ಅಪ್ರಿಯ ಪ್ರಸಂಗವನ್ನು ನೋಡಿ, ಆ ಸ್ಥಳದಿಂದ ಕಾಲ್ದೆಗೆದನು. ಸುಭದ್ರೆಯು ಕೈಗಳನ್ನು ಕೊಸರಿಕೊಂಡು ಕಣ್ಣುಗಳನ್ನು ಒರಸಿಕೊಳ್ಳುತ್ತ: ''ನಾನು ಕೇವಲ ನಿಮ್ಮ ಅಹಿತಾಚರಣೆಯನ್ನು ಆಚರಿಸುತ್ತಿರುವೆನೆಂದ ಬಳಿಕ ಈ ಮನೆಯಲ್ಲಿ ಕಾಲಿಡಲು ಅಯೋಗ್ಯಳು! ನಾನಿಲ್ಲಿಗೆ ಬರುವುದರಿಂದ ನಿಮಗೆ ಹಿತವಿಲ್ಲವಿಷ್ಟೇ ಅಲ್ಲ; ಭಯಂಕರ ಅಹಿತವಿದೆ!''

"ನಾವು ಹೀಗೆ ಮಾತಾಡುವುದೊತ್ತಟ್ಟಿಗಿರಲಿ, ಸ್ವಪ್ನದಲ್ಲೂ ಭಾವಿಸಿದವರಲ್ಲ!" ಭಾಮಿನಿಯು ಹೇಳಿದಳು.

ಸುಭದ್ರೆಯು ಈ ಮಾತನ್ನು ಲಕ್ಷಿಸದೆ, ಆಳುತ್ತಲೆ ಮುಂದೆ ಮಾತಾಡಹತ್ತಿದಳು:—"ಇಂದು ಇವರು ನನ್ನೆದರಿನಲ್ಲಿ ಸ್ಪಷ್ಟವಾಗಿ ನುಡಿದು ಹೋದರು! ನಾಳೆ ಅಣ್ಣನೂ ಹೀಗೆಯೇ ಅನ್ನುವನು! ಅಣ್ಣನ ಈ ನೂತನ ಸಂಸಾರದಲ್ಲಿ ಕಾಲಿಟ್ಟು ಮಾತಾಡಬಯಸುವದೆಂದರೆ, ಸ್ವಂತದ ಅಪಮಾನ ಮಾಡಿಕೊಳ್ಳುವದಕ್ಕಾಗಿ! ಸುಶೀಲೆ, ನೀನೂ ಮನೆಗೆ ಬರುವೆಯಷ್ಟೆ? ಏಳು" ಒಂದೆರಡು ಹೆಜ್ಜೆ ಮುಂದೆ ಹೋಗಿ ಮತ್ತೆ ಮಾತಾಡತೊಡಗಿದಳು:—"ರಮೆಯು ಸತ್ತುಹೋಗಿದ್ದ ಬಳಿಕ ನಾನು ಈ ಮನೆಗೆ ಬರಬಾರದಿತ್ತು! ಬಂದದ್ದು ನನ್ನ ಮಹಾಪರಾಧವು! ಇನ್ನು ಬರುವದಿಲ್ಲ! ನಾವಿನ್ನು ತೌರುಮನೆಯ ಯಾವತ್ತು ಸಂಪರ್ಕ ಹರಕೊಂಡಂತಾಯಿತು!" ಸುಭದ್ರೆಯು ಭರದಿಂದ ಮುಂದೆ ನಡೆದಳು. ರಂಗರಾಯನು ಅವಳನ್ನನುಸರಿಸಿ ಹೊರಟು:"ತಂಗಿ, ಹೋಗಬೇಡ. ಇಲ್ಲಿ ಕುಳ್ಳಿರುವದು ನಿನಗೆ ಬೇಡವಾದರೆ, ನನ್ನ ಓದುವ ಕೋಣೆಗೆ ನಡೆ. ಅಲ್ಲಿ ಕುಳಿತುಕೊಳ್ಳೋಣ," ಎಂದು ಸಂಕೋಚದಿಂದ ನುಡಿದನು.

ಸುಭದ್ರೆಯು ತಲೆ ಅಲ್ಲಾಡಿಸಿ ಹೇಳಹತ್ತಿದಳು: "ಬಲ್ಲೆ, ಎಲ್ಲಿಯೂ ಬರಲಾರೆನು! ಅಣ್ಣಾ, ಈ ಪ್ರಸಂಗದಲ್ಲಿ ನಾನು ನಿನಗೆ ಒಂದೇ ಒಂದು ಮಾತನ್ನು ಹೇಳಿಡುವೆನು. ನೀನಿದನ್ನು ನಡಿಸು. ನೀನು ನಿನ್ನ ಈ ಮಡದಿಯ ಮೋಹಜಾಲದಲ್ಲಿ ಸಿಕ್ಕು ರಮೆಯನ್ನು ಸಂಪೂರ್ಣವಾಗಿ ಮರೆದುಹೋಗುವ ಸಂಭವವಿದೆ; ಆದರೆ ಹೀಗಾಗಗೊಡಬೇಡ! ತನ್ನ ಏಕಮಾತ್ರ ಪುತ್ರನಾದ ರಾಮನು ವಿಲಾಯತಿಗೆ ಹೋಗಿ ವಿದ್ಯಾರ್ಜಿತ ಪ್ರಸಿದ್ಧಿಯನ್ನು ಪಡೆಯಬೇಕೆಂಬುದು ಅವಳ ಉತ್ಕಟೇಚ್ಛೆಯಾಗಿತ್ತು. ನೀನು ಅವಳ ಇಚ್ಛೆಯನ್ನು ಸಫಲಗೊಳಿಸು. ನೀನು ರಾಮನ ಕಡೆಗೆ ಹೆಚ್ಚು ಲಕ್ಷ್ಯವಿರಿಸು. ಇಂದು ಈಗಳಿನ ಅವನ ಸ್ಥಿತಿಯನ್ನು ನಾವೆಲ್ಲರೂ ಕಣ್ಮುಟ್ಟ ಕಂಡಿದ್ದೇವೆ. ಅವನ ಶಿಕ್ಷಣವು ಇನ್ನು ಮುಂದೆಯೂ ಹೀಗೆಯೆ ಸಾಗಿದರೆ, ನಮ್ಮ ಸುಧಾರಕರ ಸಮಾಜದಲ್ಲಿ ನಾವೀರ್ವರೂ ಮೋರೆ ತೋರಿಸದವರಾಗಿ ಹೋಗುವೆವು!"

ಸುಭದ್ರೆಯ ಅಶ್ರುಗದ್ಗದ ಕಂಠಸ್ವರದಿಂದ ವಿಚಲಿತನಾದ ರಂಗರಾಯನು ಆರ್ಜವ ವೃತ್ತಿಯಿಂದ ಹೇಳಹತ್ತಿದನು: 'ತಂಗಿ, ನನ್ನ ಲಾಯಬ್ರರಿ ಮನೆಗೆ ನಡೆ. ನೀನು ಹೀಗೆಯೇ ಹೊರಟುಹೋದರೆ, ನನಗೆ ಅತಿಶಯ ದುಃಖವಾಗುವದು!"

ಸುಭದ್ರೆಯ ಕಣ್ಣುಗಳಿಗಿನ ಮತ್ತೆ ಅಶ್ರುಗಳುದಿರ ಹತ್ತಿದವು. ಅವಳು ಸೆರಗಿನಿಂದ ಕಣ್ಣುಗಳನ್ನು ಒರಿಸಿಕೊಂಡು ಹೇಳಹತ್ತಿದಳು:—"ಅಣ್ಣಾ, ಇನ್ನು ಹಾನೆಲ್ಲಿಯೂ ಒಲಿಲಿಕ್ಕೆ ಒಲ್ಲೆಸು! ನನ್ನ ತಂದೆಯು ಈ ಮನೆಗೆ ರಾಮುನು ಏಕ ಮಾತ್ರ ವಂಶಧರನು-ಕುಲದೀಪಕನು! ನೀನವನ ಹಿತವನ್ನು ಚೆನ್ನಾಗಿ ಚಿಂತಿಸು; ಮೈಮ್ಮರೆದು ಹೋಗಿ, ಅವನ ಅಹಿತವನ್ನು ಆಚರಿಸದಿರು!"

ಸುಭದ್ರೆಯು ಭರದಿಂದ ನಡೆದು ಹೋಗಿ, ಮೋಟರಿನಲ್ಲಿ ಕುಳಿತಳು. ಸುಶೀಲೆಯು ಸುಮ್ಮನೆ ಹೊರಟು ಒಂದು ಅತ್ತಿಗೆಯ ಪಕ್ಕದಲ್ಲಿ ಕುಳಿತಳು. ರಂಗರಾಯನು ಬಂದು ತಂಗಿಯ ಹತ್ತರ ನಿಂತುಕೊಂಡು: "ತಂಗಿ, ನಿನ್ನಿಷ್ಟ ವಿದ್ದರೆ ರಾಮುನನ್ನು ಕರೆದುಕೊಂಡು ಹೋಗು. ನಿನಗೆ ಮಕ್ಕಳಿಲ್ಲ. ಅವ ನನ್ನೇ ಮಗನೆಂದು ಭಾವಿಸಿ ರಕ್ಷಿಸು. ನಿನ್ನ ಅಪೇಕ್ಷೆಯ ಮೇರೆಗೆ ಅವನ ಶಿಕ್ಷಣವನ್ನು ಸಾಗಿಸು," ಎಂದು ನುಡಿದನು.

ಸುಭದ್ರೆಯೂ ಸುಶೀಲೆಯೂ ವಿಸ್ಮಯದಿಂದ ರಂಗರಾಯನ ಕಡೆಗೆ ನೋಡಹತ್ತಿದರು. ತುಸ ಹೊತ್ತಿನ ಮೇಲೆ ಸುಭದ್ರೆಯು: "ಅಣ್ಣಾ, ಯಾಕೆ ಈ ದಂಭಾಚಾರದ ಮಾತಾಡುತ್ತಿರುವೆ? ನೀನು ರಾಮುನನ್ನು ನನಗೊಪ್ಪಿಸ ಲಾರೆ—ಒಂದು ವೇಳೆ ನೀನು ಮನಸ್ಸು ಮಾಡಿದರೂ, ನಿನ್ನ ಪ್ರಿಯತಮೆಯು ನಿನ್ನಾಟವನ್ನು ನಡೆಯುಗೊಡಳು!" ಎಂದು ನುಡಿದಳು.

"ತಂಗಿ, ಏನಾದರೊಂದು ಭಾವಿಸಿ ಹೀಗೆ ಮಾತಾಡಬೇಡ. ರಾಮು ನನ್ನು ನಿನಗೆ ಒಪ್ಪಿಸುವೆನೆಂದು ನಾನು ನಿನಗೆ ವಚನ ಕೊಡಬಲ್ಲೆನು!" ರಂಗರಾ ಯನು ಉತ್ತೇಜಿತನಾಗಿ ನುಡಿದನು.

"ಅಣ್ಣಾ, ನಿನ್ನ ವಚನದ ಬೆಲೆಯು ಮುಂದೆ ಗೊತ್ತಾಗುವುದು. ಈ ವಿಷಯದಲ್ಲಿ ಈಗ ನಾನು ಹೆಚ್ಚಾಗಿ ಮಾತಾಡಬಯಿಸುವದಿಲ್ಲ. ನಿನಗೆ ಸಾಧ್ಯ ವಿದ್ದರೆ, ರಾಮುನನ್ನು ನನ್ನ ಮನೆಗೆ ಕಳುಹಿಸಿಕೊಡು. ನಾನವನ ಶಿಕ್ಷಣವನ್ನು ಸರಿಯಾಗಿ ಸಾಗಿಸುವೆನು. ನೀನು ಅವನ ವಿಲಾಯತಿಯ ವೆಚ್ಚವನ್ನು ಕೊಡ ಲಿಕ್ಕೆ ಅಸಮರ್ಥನಾಗಿದ್ದರೆ, ನಾನು ಕೊಡುವೆನು. ಇದು ನನ್ನ ವಚನವೆಂದು ತಿಳಿ. ನಾನು ಈ ಮಾತಿಗೆ ಎಂದೂ ತಪ್ಪುವವಳಲ್ಲ" ಎಂದು ನುಡಿದು ಸುಭದ್ರೆಯು ಸುಶೀಲೆಯ ಗ್ರಾಹಿಯ ನುಸುರಿಸಿ ಮೇಲೆ ನೋಡಿದಳು. ಭಾಮಿ ನಿಯು ಚಂದ್ರಶಾಲೆಯ ಗಜವನ್ನು ಹಿಡಿದುಕೊಂಡು ತನ್ನ ಕಡೆಗೆ ನೋಡುತ್ತಿ ರುವುದನ್ನು ಕಂಡಳು. ಕ್ಷಣಕಾಲದಲ್ಲಿ ಮೋಟರ ಬಂಡಿಯು ಮುಂದೆ ಸಾಗಿ

ಅದೃಶ್ಯವಾಗಿ ಹೋಯಿತು. ರಂಗರಾಯನು ತನ್ನ ಓದುವ ಕೋಣೆಯಲ್ಲಿ ಹೋಗಿ ಕುಳಿತುಕೊಂಡನು. ಅಂತಸ್ತಿನ ಮೇಲೆ ಹೋಗಿ ಹೆಂಡತಿಯನ್ನು ಮಾತಾಡಿಸುವ ಇಚ್ಛೆಯು ಅವನಿಗಾಗಲಿಲ್ಲ; ಧೈರ್ಯವೂ ಇರಲಿಲ್ಲ. ಯಾಕಂದರೆ, ಸುಭದ್ರೆಯೊಡನೆ ತಾನಾಡಿದ ಎಲ್ಲ ಮಾತುಗಳನ್ನು ಭಾಮಿನಿಯು ಕೇಳಿಕೊಂಡಿರುವಳೆಂಬುದು ಅವನಿಗೆ ಗೊತ್ತಾಗಿತ್ತು.

## ೬

ರಾತ್ರಿಯಲ್ಲಿ ಭಾಮಿನಿಯು ಎಡೆ ಬಡಿಸಹತ್ತಿ, ಪತಿಯನ್ನು ಊಟಕ್ಕೆ ಕರೆ ಕಳುಹಿಸಿದಳು. ತುಸ ಹೊತ್ತಿನಲ್ಲಿ ರಂಗರಾಯನು ಭೋಜನಶಾಲೆಗೆ ಬಂದು ನೋಡಿದನು. ಎಲ್ಲ ವ್ಯವಸ್ಥೆಯೂ ದಿನದಂತೆ ಇತ್ತು. ರಂಗರಾಯನು ಮಣೆಯ ಮೇಲೆ ಕುಳಿತನು. ಇವನ ಮುಖವು ದಿನದಂತೆ ನಗೆಯ ಲಕ್ಷಣವನ್ನು ಪ್ರಕಟಿಸುತ್ತಿರಲಿಲ್ಲ—ಬಹು ಗಂಭೀರವಾಗಿತ್ತು. ಭಾಮಿನಿಯು ಕೊಂಚ ದೂರದಲ್ಲಿ ಕುಳಿತಿದ್ದಳು. ರಾಮನು ಮಾತ್ರ ಇಂದು ಬಳಿಯಲ್ಲಿರಲಿಲ್ಲ. ಕೆಣಕಿ ಮಾತಾಡಿಸುವುದು ಭಾಮಿನಿಯ ಸ್ವಭಾವವಾಗಿರಲಿಲ್ಲ. ಕಾರಣ ಇವಳು ಮಧ್ಯಾಹ್ನದ ಸಂಗತಿಯ ಬಗ್ಗೆ ಯಾವ ಮಾತನ್ನೂ ಎತ್ತಿರಲಿಲ್ಲ. ತನ್ನ ಅಪರೋಕ್ಷದಲ್ಲಿ ನಡೆದಿದ್ದ ಸಂಗತಿಗಳನ್ನು ತಿಳಕೊಳ್ಳಲಿಕ್ಕೆ ಕುತೂಹಲತೆಯನ್ನು ತೋರಿಸಲಿಲ್ಲ. ರಂಗರಾಯನು ಈ ಕೆಲದಿನಗಳ ವ್ಯವಹಾರದಿಂದ ಪತ್ನಿಯ ಈ ಸ್ವಭಾವವನ್ನು ಚನ್ನಾಗಿ ಅರಿತಿದ್ದನಾದ್ದರಿಂದ ಭಾಮಿನಿಯ ಮೌನವನ್ನು ನೋಡಿ ಆಶ್ಚರ್ಯವೆನಿಸಲಿಲ್ಲ; ಆದರೆ ಕೋಪವುಂಟಾಯಿತು. ಊಟಮಾಡಹತ್ತಿದ್ದ ರಂಗರಾಯನು ಆಗಾಗ್ಗೆ ಮೋರೆಯನ್ನೆತ್ತಿ ಹೆಂಡತಿಯ ಮುಖದ ಕಡೆಗೆ ನೋಡಹತ್ತಿದನು. ಆದರೆ ಭಾಮಿನಿಯು ಇಂದು ದಿನದಂತೆ ಕುಳಿತಿರಲಿಲ್ಲ—ದೀಪಕ್ಕೆ ಮರೆಯಾಗಿ ಮೋರೆದಿರುವಿಕೊಂಡು ಕೂತಿದ್ದಳು. ಆದುದರಿಂದ ರಂಗರಾಯನಿಗೆ ಪತ್ನಿಯ ಮುಖಭಾವವು ಎಂದಿನಂತೆ ಇಂದು ಸ್ಪಷ್ಟವಾಗಿ ಕಾಣಲಿಲ್ಲ.

ರಂಗರಾಯನಿಗೆ ದಿನದಂತೆ ಊಟ ಹೋಗಲಿಲ್ಲ; ಆದರೆ ಭಾಮಿನಿಯು ಈ ವಿಷಯವಾಗಿಯೂ ಪತಿಗೆ ಪ್ರಶ್ನಮಾಡಲಿಲ್ಲ—ಇನ್ನಿಷ್ಟು ಊಟಮಾಡಿರೆಂದು ಒತ್ತಾಯ ಪಡಿಸಲಿಲ್ಲ. ಇದರಿಂದ ರಂಗರಾಯನ ಕೋಪವು ಹೆಚ್ಚಿತು. ಇವನು ಸತಿಯ ಕಾರಣವನ್ನು ಕೇಳದಿದ್ದರೂ, ಒತ್ತಾಯದಿಂದ ಕೇಳಿಸುವ ಸಂಕಲ್ಪ

ಮಾಡಿಕೊಂಡು ಮಾತಾಡಹತ್ತಿದನು: "ಇನ್ನು ಈ ಮಾದರಿಯ ಊಟವು ನ
ರುಚಿಸದು. ದಿನಾಲು ಒಂದೇ ಬಗೆಯ ವ್ಯವಸ್ಥೆ, ಅವೇ-ಅವೇ ಪದಾರ್ಥಗ
ಒಂದು ದಿನವಾದರೂ ಹೆಚ್ಚು ಕಡಿಮೆಯಿಲ್ಲ ನನ್ನ ದಿನದ ಊಟವು ಬೆ
ಬಗೆಯದಾಗಿತ್ತು. ಬೇಕಾದರೆ, ನೀನಿದನ್ನು ಅಡುಗೆಯ ಆಚಾರಿಯನ್ನು ವಿ
ರಿಸಿ ತಿಳಿದುಕೊಳ್ಳು. ಈಗಳಿನ ಈ ಊಟದ ವ್ಯವಸ್ಥೆಯಲ್ಲಿ ಪರಿವರ್ತನೆಯ
ದಿದ್ದರೆ ನಾನಿನ್ನು ಊಟಮಾಡಲಾರದವನಾಗಿ ಹೋಗುವೆನು!"

ಇಂದು ಗಂಡನ ಹೊಟ್ಟೆ ಹಸಿಯದಿದ್ದುದರ ನಿಜವಾದ ಕಾರಣ
ಭಾಮಿನಿಗೆ ಗೊತ್ತಿತ್ತು—ಪತಿಯು ತಾನು ವಿಚಾರಿಸದಿದ್ದರೂ ತಾನೇ ತಾನ
ಸೂಚಿಸಿದ ಕಾರಣವು ಸುಳ್ಳೆಂದು ತಿಳಿದಿದ್ದಳು. ಕಾರಣ ಇವಳು ಈ ವಿಷಯ
ಪತಿಯೊಡನೆ ಮಾತಾಡಿಸಲು ಇಚ್ಛಿಸಲಿಲ್ಲ ಯಾಕೆಂದರೆ, ಅಸತ್ಯಸಂಗತಿಯು
ವಾಗಿಯೂ ಅಸತ್ಯವಾದುದು ಎಂಬದನ್ನು ಸಿದ್ಧಗೊಳಿಸಲು ವಾದ-ವಿವಾದ
ತೊಡಗುವ ಪ್ರವೃತ್ತಿಯನ್ನು ಇವಳು ಎಂದೂ ಹೊಂದಿದವಳಲ್ಲ.

ಭಾಮಿನಿಯು ಹೀಗೆ ಮೌನದಿಂದಿರುವುದು ರಂಗರಾಯನಿಗೆ ಸೇರಲ
ಅವನ ಕೋಪವು ಮತ್ತಷ್ಟು ಹೆಚ್ಚಿತು. ಮಾತಿನ ಬಂಟನು ವಾಗ್ಯುದ್ಧಕಾ
ತೊಡೆ ಚಪ್ಪರಿಸಿಕೊಂಡು ನಿಂತಿರುವಾಗ ಪ್ರತಿಪಕ್ಷಿಯು ಹೆದರಿ ಹಿಂಜರಿದರ
ಆ ಮಾತಿನ ಬಂಟನಿಗೆ ಅಸಮಾಧಾನವಲ್ಲದೆ ಸಮಾಧಾನವಿಲ್ಲ ರಂಗರಾಯ
ಸುಮ್ಮನೆ ಕುಳಿತಿದ್ದ ಸಾಧ್ವಿಗೆ ಮತ್ತೆ ಆಘಾತಮಾಡುವ ಉದ್ದೇಶದಿ
ಮಾತಾಡಹತ್ತಿದನು:—"ಮೊದಲು ನಾನು ನಿನ್ನ ವಿಷಯದಲ್ಲಿ ಅನ್ಯಾಯವ
ಚರಿಸಿದ್ದು ನಿಜವು. ಎರಡನೆಯ ಲಗ್ನ ಮಾಡಿಕೊಂಡು ನಿನ್ನನ್ನು ಮರೆದಿದ್ದು
ನನ್ನದು ಮಹಾಪರಾಧವು; ಆದರೆ ಆ ನನ್ನ ಅಪರಾಧಕ್ಕಾಗಿ ಈಗ ನೀ
ಸೇಡು ತೀರಿಸಿಕೊಳ್ಳಬಯಸುವುದು ಸರಿಯಲ್ಲ! ಈಗ ನೀನು 'ಈ ಸಂಸಾ
ನನ್ನ ತಂತ್ರದಂತೆಯೇ ನಡೆಯಬೇಕು, ಗೃಹ ವ್ಯವಸ್ಥೆಯಲ್ಲಿ ಪತಿಯಾಗಲಿ ಅ
ರಾಗಲಿ ಕೈಹಾಕಕೂಡದು.' ಎಂದೆನ್ನುವುದು ಸಮಂಜಸವಾದೀತೇನು? ಪತಿ
ಸೂತ್ರದ ಗೊಂಬೆಯಾಗಿರಬೇಕೆಂದು ನೀನು ಅಪೇಕ್ಷಿಸುವುದು ಒಳಿತಾದೀತೆ

ರಂಗರಾಯನು ಪುನರ್ದರ್ಶನದ ಪ್ರಥಮ ದಿನದಲ್ಲಿ ಭಾಮಿನಿಗೆ ಇಂ
ಕಟುಮಾತಾಡಿದವನಲ್ಲ. ಭಾಮಿನಿಯು ಈ ವಿಚಾರವನ್ನು ಮನದಂದು ವಿ
ಯಾಪನ್ನಳಾದಳು; ಆದರೆ ಇವಳು ತನ್ನ ಮನೋಭಾವನೆಯನ್ನು ಹೊ
ತೋರಗೊಡದೆ, "ನಿಮ್ಮ ಮಾತಿನ ಒಳವು ನನಗೆ ತಿಳಿಯದಾಗಿದೆ," ಎಂ
ನುಡಿದು ಸುಮ್ಮನಾದಳು.

ರಂಗರಾಯನು ಭಾಮಿನಿಯ ಈ ಸಂಕ್ಷಿಪ್ತ ಉತ್ತರದಿಂದ ಸಂತುಷ್ಟನಾಗಲಿಲ್ಲ. ಇವನು ಮತ್ತೆ ಮಾತಾಡಹತ್ತಿದನು: ನಮ್ಮ ಶಿಕ್ಷಣವೂ, ಸಂಸ್ಕಾರವೂ, ಸಮಾಜವೂ ಒಂದು ವಿಧದ್ದಾಗಿದೆ. ನೀನು ನಮ್ಮ ಶಿಕ್ಷಣದ, ಸಂಸ್ಕಾರದ, ಸಮಾಜದ ವೈಶಿಷ್ಟ್ಯವನ್ನು ಲಕ್ಷಿಸದೆ, ನನ್ನೀ ಮನೆಯನ್ನು ಆಚಾರ್ಯರ ಮನೆಯಲ್ಲಿ ರೂಪಾಂತರಗೊಳಿಸಲು ಯತ್ನಿಸುತ್ತಿರುವೆ ಹೀಗಾಗುವುದು ನಮಗೆ ಪರಮಘಾತುಕವು! ನಿನ್ನ ಈ ಕೃತಿಯಿಂದ ನಾವು ನಾಳೆ ನಮ್ಮ ಸಮಾಜದಲ್ಲಿ ಮೋರೆ ತೋರಿಸದವರಾಗಿ ಹೋದೇವು! ಈ ಕಾರಣದಿಂದ ನಾನು ನಾಳೆ ರಾಮುನನ್ನು ಅವನ ಅತ್ತೆಯ ಮನೆಗೆ ಕಳುಹಿಕೊಡಬೇಕೆಂದಿರುವೆನು. ಇದಕ್ಕೆ ನೀನೇನೆನ್ನುವೆ?,,

"ಅಲ್ಲಿ ಹೋಗುವುದರಿಂದಲೇ ಅವನ ಹಿತವಾಗುವಂತಿದ್ದರೆ, ಅವನನ್ನು ಅವಶ್ಯವಾಗಿ ಕಳುಹಿಕೊಡಿರಿ." ಭಾಮಿನಿಯು ನುಡಿದಳು.

ಭಾಮಿನಿಯ ಮಾತಿನಲ್ಲಿ ಕೋಪದ ಛಾಯೆಯಿರಲಿಲ್ಲ; ಸಂದಿಗ್ಧತೆಯಿದ್ದಿಲ್ಲ. ರಂಗರಾಯನು ಭಾಮಿನಿಯ ಮನಸ್ಥಿತಿಯನ್ನು ಸರಿಯಾಗಿ ತಿಳಿಯದವನಾಗಿ ಗೊಂದಲದಲ್ಲಿ ಬಿದ್ದನು. ಏತಕ್ಕಾಗಿ ನಾನು ಹೀಗೆ ಮಾತಾಡಲುಪಕ್ರಮಿಸಿರುವೆನೆಂಬದನ್ನು ರಂಗರಾಯನು ಸ್ಪಷ್ಟವಾಗಿ ಅರಿಯನು. ಆದರೂ ದುರ್ಬಲಪ್ರಕೃತಿಯ ರಂಗರಾಯನು ಕಾಲ್ಪನಿಕಮನಃಪೀಡೆ ಹಾಗು ದುರಭಿಮಾನಗಳಿಂದ ಪರಿಚಾಲಿತನಾಗಿ ಭರದಿಂದ ಮುಂದರಿಯಹತ್ತಿದನು:"ರಾಮುನು ತನ್ನ ಅತ್ತೆಯ ಮನೆಯಲ್ಲಿರುವುದರಿಂದಲೆ ಉನ್ನತಿಯನ್ನು ಹೊಂದುವನೆಂಬುದು ನಮ್ಮೆಲ್ಲರ ವಿಶ್ವಾಸವು. ಅಂತೆಯೇ ನಾನವನನ್ನು ಅಲ್ಲಿಗೆ ಕಳುಹಿಕೊಡಬೇಕೆಂದು ಅನ್ನುತ್ತಿರುವೆನು. ಯಾವ ಆಚಾರ-ವ್ಯವಹಾರ, ರೀತಿ-ನೀತಿಗಳನ್ನು ನಾವು ಈ ವರೆಗೆ ಮನ್ನಿಸಿಲ್ಲವೊ ಮುಂದೆಯೂ ಮನ್ನಿಸಲಾರದವರಾಗಿರುವೆವೊ ಆ ಆಚಾರ-ವ್ಯವಹಾರಗಳಿಗಾಗಿ ಇಂದು ಅಣ್ಣ ತಂಗಿಯರು ಕಲಹಿಸುವದು ತರವಲ್ಲ. ಇದರಿಂದ ನಾನು ನಮ್ಮ ಸಮಾಜದ ಪರಿಹಾಸಕ್ಕೆ ಗುರಿಯಾಗಬೇಕಾಗುವದು. ಹೀಗಾಗಗೊಡುವುದು ನನ್ನ ಮನಸ್ಸಿಗೆ ಬಾರದು."

ಭಾಮಿನಿಯು ತನ್ನ ಪಕ್ಷಸಮರ್ಥನೆಗೆ ಮನಸ್ಸು ಮಾಡಲಿಲ್ಲ-ಪ್ರತ್ಯುತ್ತರ ಕೊಡಲಿಲ್ಲ. ಅವಳು ನಿಟ್ಟುಸಿರಬಿಟ್ಟು ಸುಮ್ಮನಿದ್ದಳು. ಶಾಂತವಾದ ಆ ಗೃಹದಲ್ಲಿ ಭಾಮಿನಿಯು ಉಸುಗರೆದ ಸಪ್ಪಳವು ರಂಗರಾಯನಿಗೆ ಕೇಳಿಸಲಿಲ್ಲ. ಭಾಮಿನಿಯು ಎಂದೂ ಕಲಹ ಪ್ರವೃತ್ತಳಾದವಳಲ್ಲ. ಸುಭದ್ರೆಯು ಇವಳ

ಸಮ್ಮುಖದಲ್ಲಿ ಕಠೋರವಚನಗಳ ಮಳೆಗರೆದಿದ್ದರೂ, ಭಾಮಿನಿಯು ಪ್ರತ್ಯುತ್ತರವಾಗಿ ಒಂದು ಮಾತನ್ನು ಸಹ ಉಚ್ಚರಿಸಿದವಳಲ್ಲ. ಇದರಿಂದ ರಂಗರಾಯನು ಭಾಮಿನಿಗೆ ದೋಷದ ಹೊರೆಯನ್ನು ಹೊರಿಸಲಸಮರ್ಥನಾಗಿದ್ದನು.

---

## ೧೦

ರಂಗರಾಯನು ತನ್ನ ಹಾಸುಗೆಯ ಮೇಲೆ ಮಲಗಿದ್ದನು ಕೊಂಚ ದೂರದಲ್ಲಿರುವ ಬೇರೊಂದು ಶಯ್ಯೆಯಲ್ಲಿ ಭಾಮಿನಿಯು ಮಲಗಿದ್ದಳು. ಇವಳ ಹತ್ತಿರವೆ ರಾಮನು ಮಲಗಿದ್ದನು. ದೀಪದ ಅಲ್ಪಪ್ರಕಾಶವು ಕೋಣೆಯಲ್ಲಿ ಬಿದ್ದಿತ್ತು. ರಾಮನು ಗಾಢನಿದ್ರೆಯಲ್ಲಿದ್ದನು ದಂಪತಿಗಳಿಗೆ ಇನ್ನೂ ನಿದ್ದೆ ಹತ್ತಿರಲಿಲ್ಲ.

ಸುಭದ್ರೆಗೆ ಸಂತಾಪವಾಗುವಂತೆ ಮಾತಾಡಿದವನು ಭೀಮರಾಯನು. ಇದರಲ್ಲಿ ಭಾಮಿನಿಯ ಅಂಗವೆಷ್ಟು ಮಾತ್ರವೂ ಇರಲಿಲ್ಲ. ಈ ವಿಷಯದಲ್ಲಿ ಭಾಮಿನಿಯು ದೋಷಾರ್ಹಳಾಗಲಿಲ್ಲವಿಷ್ಟೆ ಅಲ್ಲ! ದೊಡ್ಡ ಮನಸ್ಸನ್ನೂ ಸಹನಶೀಲತೆಯನ್ನೂ ತೋರಿಸಿ ಗೌರವಕ್ಕೆ ಪಾತ್ರಳಾಗಿದ್ದಳು. ರಂಗರಾಯನು ಇದಕ್ಕಾಗಿ ಭಾಮಿನಿಯನ್ನು ಗೌರವಿಸಲಿಲ್ಲ ಮಾತ್ರವಲ್ಲ; ಊಟಕ್ಕೆ ಕುಳಿತಾಗ ಆವೇಶದಿಂದ ವಾಗ್ಬಾಣಗಳನ್ನು ಸುರಿಸಿದ್ದನು ಉತ್ತೇಜನವು ಅಡಗುತ್ತಲೆ ಈ ವಿಷಯದಲ್ಲಿ ರಂಗರಾಯನಿಗೆ ಅನುತಾಪವಾಗದಿರಲಿಲ್ಲ ಅವನು ಈ ತಳಮಳದಿಂದ ಪ್ರೇರಿತನಾಗಿ ಈಗ ಮಾತಾಡಹತ್ತಿದನು:"ನನ್ನ ಹಾಗೂ ಸುಭದ್ರೆಯ ಮನಸ್ತಾಪಕ್ಕೆ ನಿನ್ನ ವ್ಯವಹಾರವು ಕಾರಣವಲ್ಲ ಭೀಮರಾಯನ ಮಾತುಗಳು ಕಾರಣೀಭೂತವಾದುವು. ಅವನು ಆ ವಿಚಾರವನ್ನು ನಿನ್ನ ಮೇಲೆ ಹೊರಿಸಬಯಿದವನು ನಾನಲ್ಲ. ನಾನು ರಾಮನ ಭವಿಷ್ಯತ್ಕಾಲದ ಚಿಂತೆಯಿಂದ ಊಟಕ್ಕೆ ಕೂತಾಗ ಹಾಗೆ ಮಾತಾಡಿದೆನು. ರಾಮನು ಮುಂದೆ ವಿಲಾಯತಿಗೆ ಹೋಗಿ ವಿದ್ಯೆಗಲಿಯಬೇಕಾಗಿದೆ ಸುಧಾರಕರ ಸಮಾಜದಲ್ಲಿ ವ್ಯವಹರಿಸಬೇಕಾಗಿದೆ. ಇಂಥವನಿಗೆ ಬಾಲ್ಯಕಾಲದಿಂದಲೂ ಅನುರೂಪಶಿಕ್ಷಣವು ದೊರೆಯುತ್ತ ಹೋಗುವುದು ಅವಶ್ಯವು. ಈ ಕಾರಣದಿಂದ ಪುರಾಣಮತಾಭಿಮಾನಿಗಳ ಸಹವಾಸವು ಅವನಿಗೆ ಹಿತಕರವಲ್ಲ. ಅವನು ಈಗಿನಿಂದಲೇ ಸುಧಾರಕರ ಸಂರಕ್ಷಣೆಯಲ್ಲಿರಬೇಕು. ಸುಧಾರಕರ ಆಚಾರ-ವಿಚಾರಗಳನ್ನು ಅವಲೋಕಿಸಿ ಅನುಕರಣ

ಮಾಡಬೇಕು. ಈ ಕಾರಣದಿಂದಲೇ ನಾನು ರಾಮುನನ್ನು ಅವನ ಅತ್ತೆಯ ಮನೆಗೆ ಕಳುಹಿಕೊಡುವ ಸ್ಥಿರಸಂಕಲ್ಪ ಮಾಡಿಕೊಂಡಿದ್ದೇನೆ. ಇದಕ್ಕೆ ನಿನ್ನ ಆಕ್ಷೇಪಣೆಯೇನಾದರೂ ಇದೆಯೋ? ಹೀಗೆ ಸುಮ್ಮನಿದ್ದರೆ ನಿನ್ನ ಅಭಿಪ್ರಾಯವು ನನಗೆ ಹೇಗೆ ತಿಳಿಯಬೇಕು?''

ಭಾಮಿನಿಯು ಹತ್ತಿರ ಮಲಗಿ ನಿದ್ರಿಸುತ್ತಿದ್ದ, ರಾಮುನ ಹಣೆಯ ಮೇಲೆ ಸ್ನೇಹಭರದಿಂದ ಮೆಲ್ಲನೆ ಕೈಯಾಡಿಸಿ ಮಾತಾಡಹತ್ತಿದಳು: "ನೀವು ಸಂಕಲ್ಪಿಸಿಕೊಂಡಿರುವುದು ರಾಮುನ ಹಿತಕ್ಕಾಗಿಯೇ ಇರಲಿಕ್ಕೆಬೇಕು. ಇದಕ್ಕೆ ವಿಪರೀತವಾಗಿ ನಾನೆಂದಾದರೂ ಭಾವಿಸಬಲ್ಲೆನೆ? ನಿಮ್ಮ ಇಷ್ಟವಿರುವಂತೆ ಮಾಡಿರಿ.''

ರಂಗರಾಯನು ಹಾಸಗೆಯ ಮೇಲೆ ಎದ್ದು ಕುಳಿತು ಆ ಮಂದಪ್ರಕಾಶದಲ್ಲಿ ಹೆಂಡತಿಯ ಮುಖದ ಕಡೆಗೆ ನೋಡಿ ಹೇಳಹತ್ತಿದನು: "ಮತ್ತೊಂದು ಮಾತೆಂದರೆ, ಅವಳು ಎಲ್ಲ ವೆಚ್ಚವನ್ನು ನಾನು ಕೊಡುವೆನೆಂದು ಹೇಳಿದ್ದಾಳೆ. ಇದೇನು ಸಾಮಾನ್ಯ ಸಂಗತಿಯೆ?''

"ಸಾಮಾನ್ಯವೆ ಇರಲಿ, ಅಸಾಮಾನ್ಯವೆ ಇರಲಿ. ನಾನು ಮಾತ್ರ ಈ ಸಂಗತಿಯನ್ನು ಒಪ್ಪಲಾರೆನು. ರಾಮುನು ನಮ್ಮ ಮಗನು ಇವನ ಶಿಕ್ಷಣದ ವೆಚ್ಚವನ್ನು ನಾವು ಕೊಡಲಿಕ್ಕೆಬೇಕು ಈ ವೆಚ್ಚವನ್ನು ತಂಗಿಯ ಮೇಲೆ ಹೇರುವುದು ನ್ಯಾಯವಲ್ಲ. ನಮ್ಮ ಹಣದಿಂದಲೇ ರಾಮುನು ವಿದ್ಯಾವಂತನಾಗಿ ಹೆಸರು ಪಡೆಯಬೇಕೆಂಬುದು ನನ್ನ ಉತ್ಕಟೇಚ್ಛೆಯಾಗಿದೆ.'' ಭಾಮಿನಿಯು ಶಾಂತಸ್ವರದಿಂದಲೆ ನುಡಿದಳು.

"ವಿಲಾಯತಿಯ ವೆಚ್ಚವು ಅಷ್ಟಿಷ್ಟಲ್ಲ. ಹತ್ತಿಪ್ಪತ್ತು ಸಾವಿರ ರೂಪಾಯಿಗಳು ಸಹಜವಾಗಿ ಬೇಕು. ಈ ಹಣವು ನಮ್ಮ ಯೋಗ್ಯತೆ ಮೀರಿದ್ದಲ್ಲವೆ?'' ರಂಗರಾಯನು ಕೇಳಿದನು.

"ವೆಚ್ಚವು ಎಷ್ಟೆ ಹಿಡಿಯಲಿ, ನಾವು ಅದನ್ನು ಕೊಡಲಿಕ್ಕೆ ಬೇಕು. ರಾತ್ರಿಯು ಬಹಳವಾಗಿದೆ. ಇನ್ನು ಮಲಗಿಕೊಳ್ಳಿರಿ. ರಾತ್ರಿಯಲ್ಲಿ ಬಹಳ ಹೊತ್ತಿನ ವರೆಗೆ ಜಾಗರಣ ಮಾಡುವದು ಹಿತಕರವಲ್ಲ.'' ಭಾಮಿನಿಯು ನುಡಿದಳು. ಜನನಿಯು ತೋರಿದ ಬಾವಾನ ಬೆದರಿಕೆಯಿಂದ ಬಾಲಕನು ಮನಸ್ಸಿಲ್ಲದಿದ್ದರೂ ಮಲಗಿಕೊಳ್ಳುವಂತೆ ರಂಗರಾಯನು ಮತ್ತೆ ಹಾಸಗೆಯ ಮೇಲೆ ಒರಗಿಕೊಂಡನು.

ಮರುದಿನ ಇಳಿಹೊತ್ತಿನಲ್ಲಿ ಕಾಲೇಜದಿಂದ ಮನೆಗೆ ಬಂದ ರಂಗರಾಯನು,

ಅಡುಗೆಯು ಪರಿಚಿತ ಗಂಧವನ್ನು ಆಘ್ರಾಣಿಸಿ ವಿಸ್ಮಿತನೂ, ಆನಂದಿತನೂ ಆಗಿ, ತನ್ನ ಓದುವ ಕೋಣೆಯನ್ನು ಹೊಕ್ಕನು. ಅಲ್ಪಾವಕಾಶದಲ್ಲಿಯೇ ಸೇವಕನು ಚಹ-ಬಿಸ್ಕೀಟುಗಳನ್ನು ತಂದಿರಿಸಿದನು. ರಂಗರಾಯನು ಭಾಮಿನಿಯ ಮಾರ್ಗ ಪ್ರತೀಕ್ಷೆ ಮಾಡಿದನು; ಆದರೆ ಅವಳು ಬರಲಿಲ್ಲ. ರಂಗರಾಯನು ಚಹಾಪಾನದ ವಿಧಿಯನ್ನು ತೀರಿಸಿಕೊಂಡನು.

ರಾತ್ರಿಯಲ್ಲಿ ರಂಗರಾಯನು ಪರಿಚಾರಿಕೆಯಿಂದ ಆಮಂತ್ರಣ ಹೊಂದಿ ಭೋಜನಶಾಲೆಗೆ ಹೋದನು. ಅತ್ತಿತ್ತ ನೋಡಿದನು. ಕೆಲಕಾಲ ಅಡಗಿದ್ದ ಪದಾರ್ಥಗಳು ಮತ್ತೆ ತಲೆ ಎತ್ತಿದ್ದುವು. ಬಹುದಿನಗಳ ತರುವಾಯ ಕಣ್ಣಿಗೆ ಬಿದ್ದ ಈ ಪದಾರ್ಥಗಳನ್ನು ಕಂಡು ರಂಗರಾಯನ ರಸನೆಯು ಆರ್ದ್ರವಾಯಿತು; ಆದರೆ ಅಲ್ಲಿ ಭಾಮಿನಿಯಿರಲಿಲ್ಲ. ಅಡುಗೆಯ ಆಚಾರಿಯು ಬಡಿಸುತ್ತಿದ್ದನು.

ರಂಗರಾಯನು ಭೋಜನವನ್ನಾರಂಭಿಸಿದನು. ನಾಲ್ಕಾರು ತುತ್ತುಗಳನ್ನು ಬಾಯಿಯಲ್ಲಿ ಹಾಕಿಕೊಂಡಿದ್ದನು. ಈ ಸಮಯದಲ್ಲಿ ಭಾಮಿನಿಯು ಬಂದು ದೂರದಲ್ಲಿ ಕುಳಿತುಕೊಂಡಳು. ರಂಗರಾಯನ ಮನಸ್ಸು ಪ್ರಸನ್ನವಾಗಿತ್ತು. ಅವನು ವಿನೋದದಿಂದ "ನೀನು ಇಲ್ಲಿಗೆ ಯಾಕೆ ಬಂದೆ? ಜಾತಿಭ್ರಷ್ಟಳಾಗುವ ಭಯವಿಲ್ಲವೆ? ಅಡುಗೆಯ ಪದಾರ್ಥಗಳ ವಾಸನೆ ತಕ್ಕೊಂಡರೆ ಅರ್ಧಭೋಜನ ಮಾಡಿದಂತಾಯಿತೆಂದು ಶಾಸ್ತ್ರದಲ್ಲಿ ಹೇಳಿದೆ," ಎಂದು ನುಡಿದನು.

ಭಾಮಿನಿಯು ತುಸ ನಕ್ಕು ಮಾತಾಡಹತ್ತಿದಳು:—"ನೀವು ಹೀಗೆ ಮಾತಾಡುವದು ಉಚಿತವಲ್ಲ. ಯಾಕೆಂದರೆ, ಯಾವ ಶಾಸ್ತ್ರವನ್ನು ನೀವು ಒಪ್ಪುವದಿಲ್ಲವೋ, ಯಾವಶಾಸ್ತ್ರದಲ್ಲಿ ಹೇಳಿರುವಂತೆ ನೀವು ಆಚರಿಸುವದಿಲ್ಲವೋ ಅಂತಹ ಶಾಸ್ತ್ರದ ಆಧಾರವನ್ನು ತೋರುವದು ನಿಮಗೆ ಸಮಂಜಸವೆನಿಸುವದೆ?"

ರಂಗರಾಯನೂ ನಕ್ಕು ಮಾತಾಡತೊಡಗಿದನು: "ಆಗಲಿ, ನಾನು ನನ್ನ ತಪ್ಪನ್ನೊಪ್ಪಿಕೊಳ್ಳುವೆನು. ಇನ್ನು ನಾನು ಶಾಸ್ತ್ರದ ಆಧಾರ ತೋರುವದೂ ಬೇಡ. ನೀನು ಇಲ್ಲಿಂದ ಓಡಿಹೋಗುವದೂ ಬೇಡ. ಶಾಂತಚಿತ್ತಳಾಗಿ ಕುಳಿತಿದ್ದು ನಾನಾಡುವ ಮಾತುಗಳನ್ನು ಕೇಳು. ನಿನ್ನೆ ನಾನು ನಿನಗೆ ವಾಕ್ಪ್ರಹಾರ ಮಾಡಿದ್ದಕ್ಕಾಗಿ ಇಂದು ನನಗೆ ಈ ಭೋಜನ ಸೌಭಾಗ್ಯವು ದೊರೆತಿರುವುದೆಂದು ನಾನು ಭಾವಿಸಿದ್ದೇನೆ. ಪ್ರಿಯೆ, ನನ್ನ ಈ ಭಾವನೆಯು ನಿಜವಷ್ಟೆ? ನಿನ್ನ ಅಡುಗೆಯು ಕೆಟ್ಟದೆಂದು ನಾನು ಹೇಳುವದಿಲ್ಲ. ಅದು ಅತ್ಯು

ಕ್ರಮವಾದುದು; ಆದರೆ ನಿನ್ನ ಆ ಸೌಖ್ಯಪದಾರ್ಥಗಳು ರಾಕ್ಷಸೀಆಹಾರದಲ್ಲಿ ಅಭ್ಯಸ್ತನಾದ ನನಗೆ ಚಿರಕಾಲಿಕ ಪ್ರಿಯವಾಗವು. ಅಂತಯೇ ನಾನು ನಿನ್ನೆ ಹಾಗೆ ಮಾತಾಡಬೇಕಾಯಿತು. ಇರಲಿ, ದಿನಾಲು ಹೀಗೆ ಭೋಜನ ವ್ಯವಸ್ಥೆ ಯನ್ನಿರಿಸುವದರಿಂದ ವೆಚ್ಚವು ಹೆಚ್ಚಾಗುವಂತಿದೆಯೇ?"

"ಅಪವ್ಯಯವಾಗದಂತೆ ಎಚ್ಚರದಿಂದಿದ್ದರೆ, ಭೋಜನದ ವ್ಯವಸ್ಥೆಯನ್ನು ಹೇಗೆ ಇಟ್ಟುಕೊಂಡರೂ, ಖರ್ಚ ಹೆಚ್ಚು ಬೀಳದು. ಮುಂದಿನ ತಿಂಗಳಿಂದ ನಾನಾಗಿಯೇ ಹೀಗೆ ವ್ಯವಸ್ಥೆ ಮಾಡಬೇಕೆಂದಿದ್ದೆನು; ಆದರೆ ನಿಮ್ಮ ಆಗ್ರಹ ದಿಂದ ಇಂದಿನಿಂದಲೆ ಹೀಗೆ ಮಾಡಬೇಕಾಯಿತು."

ಭಾಮಿನಿಯು ಕ್ಷಣಕಾಲ ನೀರವವಾಗಿದ್ದು ಬಳಿಕ ಪತಿಯ ಮುಖದ ಮೇಲೆ ದೃಷ್ಟಿಯಿರಿಸಿ ಮಾತಾಡಹತ್ತಿದಳು: "ನಿನ್ನೆ ನೀವು ಆಡಿದ ಮಾತುಗಳ ಬಗ್ಗೆ ಬೆಳತನಕ ವಿಚಾರಿಸಿದೆನು. ಮುಂದೆ ಹೇಗೆ ವರ್ತಿಸಬೇಕೆಂಬುದನ್ನು ನಿಶ್ಚಯಿಸಿಕೊಂಡೆನು. ಆ ನಿಶ್ಚಯದಂತೆ ನಾನು ನಡೆಯಬೇಕಾಗಿದೆ ನೀವು ನನ್ನ ಆ ನಿರ್ಧಾರದಂತೆ ನನ್ನನ್ನು ನಡೆಯಗೊಡಬೇಕೆಂದು ನಾನೀಗ ನಿಮ್ಮನ್ನು ಸೆರಗೊಡ್ಡಿ ಬೇಡಿಕೊಳ್ಳುವೆನು"

ರಂಗರಾಯನು ಸತಿಯ ಇಂಗಿತವನ್ನರಿಯದವನಾಗಿ ಹೇಳಹತ್ತಿದನು: "ಪ್ರಿಯೆ, ನೀನು ಸಬಲಚಿತ್ತಳು. ನಿರ್ಧಾರಣೆಯಂತೆ ನಡೆದೇ ತೀರುವೆ. ಆ ನಿನ್ನ ನಿರ್ಧಾರಣೆಯಂತೆ ನಡೆಯುವಿಕೆಗೆ ನನ್ನಿಂದ ಅಡ್ಡಿಯಾದೀತೆಂದು ತಿಳಿದಿರು ವೆಯಾ? ಹೀಗೆಂದಿಗೂ ಭಾವಿಸದಿರು. ನೀನು ಅಸಮಂಜಸವಿಚಾರ ಮಾಡತಕ್ಕ ವಳಲ್ಲ, ಅಯೋಗ್ಯರೀತಿಯಿಂದ ವರ್ತಿಸತಕ್ಕವಳಲ್ಲ, ಎಂಬುದನ್ನರಿತಿದ ನಾನು ನಿನ್ನ ಕಾರ್ಯಕ್ರಮದಲ್ಲಿ ವ್ಯಾಘಾತವನ್ನೆಂದೂ ಉಂಟುಮಾಡುವದಿಲ್ಲ"

ಭಾಮಿನಿಯು ಪತಿಯ ಮೋರೆಯಿಂದ ತನ್ನ ನೋಟವನ್ನು ಹೊರಳಿಸಿ ಮೆಲ್ಲಮೆಲ್ಲನೆ ಮಾತಾಡಹತ್ತಿದಳು: "ಬಹಳವಾಗಿ ವಿಚಾರಿಸಿ ಸ್ಥಿರಪಡಿಸಿಕೊಂಡಿ ಟ್ಟಿರುವೆನು ಆ ಗೊತ್ತುವಳಿಗೆ ವಿಪರೀತವಾಗಿ ನಾನು ವರ್ತಿಸತಕ್ಕವಳಲ್ಲ."

ರಂಗರಾಯನು ಭಾಮಿನಿಯ ಬಹು ಆಲೋಚನೆಯ ತರುವಾಯದ ಆ ನಿರ್ಧಾರಣೆಯು ರಾಮನ ವಿಷಯದ್ದಾಗಿರಬೇಕೆಂದು ತರ್ಕಿಸಿದನು. ಮುಗುಳು ನಗೆಯಿಂದ ಹೇಳಹತ್ತಿದನು: "ಮುಖ್ಯ ವಿಷಯವನ್ನು ಮುಚ್ಚಿಟ್ಟು ಉಪೋ ದ್ಘಾತವನ್ನೆ ಬೆಳಿಸುತ್ತ ನಡೆಸಿರುವೆ' ಇನ್ನು ಹೀಗೆ ಮಾಡದೆ, ಆ ನಿನ್ನ ನಿರ್ಧಾ ರಣೆಯನ್ನಷ್ಟು ಬೇಗ ಹೇಳಿ ಬಿಡು. ನಿನ್ನ ಇಚ್ಛೆಗೆ ವಿರುದ್ಧವಾಗಿ ಕಾರ್ಯ

ಮಾಡಲಿಕ್ಕೆ ಒತ್ತಾಯಪಡಿಸೆನೆಂದು ನಾನು ಈಗಲೆ ನಿನಗೆ ಆಶ್ವಾಸನ ಕೊಡುತ್ತಿರುವೆನು. ಇನ್ನು ನೀನು ನಿಶ್ಶಂಕೆಯಿಂದ ನಿನ್ನ ಆ ಗೊತ್ತುವಳಿಯನ್ನು ಹೇಳು."

ಭಾಮಿನಿಯು ಒಂದೆರಡು ಮಿನಿಟುಗಳ ವರೆಗೆ ಸ್ತಬ್ಧಳಾಗಿದ್ದಳು. ಬಳಿಕ ಮತ್ತೆ ಮಾತಾಡಹತ್ತಿದಳು. "ಅಣ್ಣಂದಿರ ಸಂಸಾರದಲ್ಲಿ ವಿಶೇಷ ದುಃಖವೇನೂ ನನಗಿರಲಿಲ್ಲ. ಒಂದು ವಿಧವಾಗಿ ಸೌಖ್ಯದಿಂದಲೆ ದಿನಗಳನ್ನು ಕಳೆಯುತ್ತಿದ್ದೆನು. ನಾನು ನಾಳೆ ಮತ್ತೆ ಅಣ್ಣಂದಿರ ಮನೆಗೆ ಹೊರಡಬೇಕೆಂದಿರುವೆನು."

"ಅಣ್ಣಂದಿರ ಬಳಿಗೆ ಹೋಗುವೆಯಾ? ಮತ್ತೆ ಎಂದು ತಿರುಗಿ ಬರುವೆ?"

"ಪ್ರಾಣನಾಥರೆ, ನೀವು ನನ್ನನ್ನು ಕ್ಷಮಿಸಿರಿ! ನಾನು ತಿರುಗಿ ಬರಲಾರೆನು! ನಾನು ಬಹಳವಾಗಿ ಆಲೋಚಿಸಿರುವೆನು—ನಾನು ಇಲ್ಲಿರುವುದು ವಿಹಿತವಲ್ಲವೆಂದು ಗೊತ್ತುಮಾಡಿಕೊಂಡಿರುವೆನು. ಇದೇ ನನ್ನ ಕೊನೆಯ ನಿರ್ಧಾರಣೆಯು."

ರಂಗರಾಯನು ಜಾಯೆಯ ಈ ಮಾತು ಕೇಳಿ ದಿಙ್ಮೂಢನಾಗಿ ಹೋದನು. ಅವನಿಗೆ ತಾನೇನು ಮಾತಾಡಬೇಕೆಂಬುದು ಹೊಳೆಯದಾಯಿತು. ಸತಿಯ ಹೃದಯಮಂದಿರದ ಬಂಗಾರದ ಬಾಗಿಲು ಇಕ್ಕಿಕೊಳ್ಳುವದರಲ್ಲಿದೆ, ಇನ್ನು ಅದು ತೆರೆಯುವಂತೆ ಮಾಡುವುದು ಜಗತ್ತಿನಲ್ಲಿಯ ಯಾವನಿಂದಲೂ ಸಾಧ್ಯವಲ್ಲವೆಂದು ಅವನಿಗೆ ಬೋಧೆಯಾಯಿತು.

---



ಮುಂಜಾವಿನಲ್ಲಿ ಹಾಸುಗೆಯಿಂದೇಳುತ್ತಲೆ, ರಾತ್ರಿಯೆಲ್ಲವೂ ದುಃಸ್ವಪ್ನದಲ್ಲಿ ಕಳೆದಿರುವಂತೆ ರಂಗರಾಯನಿಗೆ ಭಾಸವಾಯಿತು. ಇವನು ಮಲಗುವ ಮನೆಯಿಂದ ಹೊರಬಿದ್ದು ಬಂದು ಅತ್ತಿತ್ತ ಅವಲೋಕಿಸಿದನು. ಭಾಮಿನಿಯು ಮನೆಗೆಲಸದಲ್ಲಿ ತೊಡಗಿದ್ದಳು. ರಾಮನು ಇವಳ ಬೆನ್ನ ಹತ್ತಿದ್ದನು. ಏನೊ ಬೇಕೆಂದು ಹಟ ಮಾಡುತ್ತಿದ್ದನು. ಕುಸಹೊತ್ತಿನ ಮೇಲೆ ಭಾಮಿನಿಯು ಪತಿಯನ್ನು ನೋಡಿ "ನಿಮ್ಮ ಚಹವನ್ನು ಸಿದ್ಧಪಡಿಸಿಟ್ಟಿರುವೆನು. ಕೈ-ಕಾಲು ತೊಳೆಕೊಳ್ಳಲಿಕ್ಕೆ ತಡವಾದರೆ, ಚಹವು ಆರಿ ಕೆಟ್ಟು ಹೋದೀತು. ಬೇಗನೆ ಕೆಲಸ ತೀರಿಸಿಕೊಳ್ಳಿರಿ," ಎಂದು ನುಡಿದಳು.

"ನೀನು ಚಹವನ್ನು ಕಳಿಹಿಕೊಡು ನಾನು ತಡಮಾಡುವುದಿಲ್ಲ. ಈಗಳೆ ಬರುವೆನು'' ಎಂದು ನುಡಿದು ರಂಗರಾಯನು ಅವಸರದಿಂದ ಹೊರಟು ಬಚ್ಚಲ ಮನೆಯನ್ನು ಹೊಕ್ಕನು. ಮನಸ್ಸಿನಲ್ಲಿಯೆ ಆಲೋಚಿಸ ಹತ್ತಿದನು:''ಎಂತಹ ಭಾವನಾಪ್ರಧಾನ ಮನುಷ್ಯನು ನಾನು! ದಾಂಪತ್ಯ ಕಲಹದ ಯುದ್ಧಘೋಷಣೆಗೆ ಭೀಷ್ಮಪ್ರತಿಜ್ಞೆಯೆಂದು ಭಾವಿಸಿ, ರಾತ್ರಿಯೆಲ್ಲವನ್ನು ಅಶಾಂತಿಯಲ್ಲೂ ದುಶ್ಚಿಂತೆಯಲ್ಲೂ ಕಳೆದೆನು!'' ಈ ವಿಚಾರವುಂಟಾಗುತ್ತಲೆ ರಂಗರಾಯನಿಗೆ ನಗೆ ಬರಹತ್ತಿತು. ಮತ್ತೆ ಯೋಚಿಸಹತ್ತಿದನು:'' ಒಂದು ಮನೆಯಲ್ಲಿ ಸಂಸಾರವನ್ನು ಸಾಗಿಸುತ್ತಿದ್ದ ಸತಿ-ಪತಿಗಳಲ್ಲಿ ಮತಭೇದವುಂಟಾಗುವುದು ಸ್ವಾಭಾವಿಕವು. ಈ ಕಾರಣದಿಂದ ವಾದ-ವಿವಾದವಾಗಲಿ ಕಲಹವಾಗಲಿ ಏಳುವುದು ಸಹಜವಾದದ್ದು; ಆದರೆ ಇಷ್ಟರಿಂದಲೆ ಸತಿಯರು ಪತಿಗೃಹವನ್ನು ತ್ಯಜಿಸಿ, ತೌರುಮನೆಯಲ್ಲಿ ಆಶ್ರಯಹೊಂದಹತ್ತಿದರೆ, ಈ ಜಗತ್ತಿನಲ್ಲಿ ಮನುಷ್ಯನ ಅಸ್ತಿತ್ವವು ಲೋಪವಾಗದಿರದು! ರಾಮನನ್ನು ಹಡೆದವಳ ಮಾತು ಬೇರೆಯಾಗಿತ್ತು. ಅವಳು ಹೀಗೆ ಮಾಡುವೆನೆಂದು ಅಂದಿದ್ದರೆ, ನಾನು ನಾಲ್ಕೆಂಟು ದಿನಗಳ ಮಟ್ಟಿಗಾದರೂ, ಭಯಗೊಳ್ಳಬೇಕಾಗಬಹುದಿತ್ತು; ಆದರೆ ಭಾಮಿನಿಯ ಮಾತು ಹಾಗಿಲ್ಲ. ಇವಳು ಆರ್ಯಲಲನೆಯರ ಆದರ್ಶದಂತೆ ಆಚರಿಸತಕ್ಕವಳು-ಪುರಾಣಮತಾಭಿಮಾನಿನಿಯು-ಕೇವಲ ಭಾವಿಕಳು. ಇಂತಹ ರಮಣಿಯರಿಗೆ ಸಂಸಾರದಲ್ಲಿ ಧರ್ಮವೊಂದು ಕಾಣುತ್ತಿದೆ, ಸ್ವಾಮಿಯೊಬ್ಬನು ಕಾಣುತ್ತಿದ್ದಾನೆ, ಮತ್ತೇನೂ ಕಾಣದು. ಇವರು ಪತಿಯ ಸಂಬಂಧದ ಇಲ್ಲವೆ ಧರ್ಮಸಂಬಂಧದ ವಿಚಾರಗಳನ್ನುಳಿದು ಬೇರೆ ಮಾತೆತ್ತರು. ಇಂತಹ ಅಬಲೆಯರು ಪತಿಯ ಒಂದೆರಡು ಮಾತುಗಳಿಗಾಗಿ ತೌರುಮನೆಗೆ ಹೋದದ್ದುಂಟೆ? ತನ್ನ ಆದರ್ಶವನ್ನೂ ಏಕಮಾತ್ರ ಧರ್ಮವಾಗಿದ್ದ ಪಾತಿವ್ರತ್ಯವನ್ನೂ ಮರೆದು ಪತಿಸೇವೆಯಿಂದ ವಂಚಿತರಾಗಬಯಸಿದ್ದುಂಟೆ? ಆರ್ಯಮಹಿಳೆಯರ ಆದರ್ಶವು ಸಾಮಾನ್ಯವಲ್ಲ ಪಾತಿವ್ರತ್ಯವು ಅಷ್ಟೊಂದು ಕ್ಷುದ್ರವಲ್ಲ ಈ ಬಂಧನಗಳಿಂದ ಬಂಧಿಸಲ್ಪಟ್ಟ ಭಾರ್ಯೆಯು ಪತಿಸಾನ್ನಿಧ್ಯವನ್ನು ಸ್ವಸಂತೋಷದಿಂದ ತ್ಯಜಿಸುವದು ಶಕ್ಯವಲ್ಲ. ಹೀಗಿರುವಾಗ ನಾನು ಭಾಮಿನಿಯ ಒಂದು ಮಾತಿನಿಂದ ಬೆದರಿದವನಾಗಿ, ಸಲ್ಲದ ನೂರಾರು ಚಿಂತೆಗೊಳಗಾಗಿ ವ್ಯಥೆಯನ್ನನುಭವಿಸಿದ್ದು ನನ್ನ ಹುಚ್ಚುತನದ ದ್ಯೋತಕವಲ್ಲದೆಮತ್ತೇನು?'' ಈ ವಿಚಾರಸರಣಿಯಿಂದ ರಂಗರಾಯನ ಭಯವೂ, ಭಾವನೆಯೂ ಅಳಿದುಹೋಗಿ, ಹೃದಯವು ಶಾಂತಿ ಹಾಗು ಪ್ರೀತಿ ರಸಗಳಿಂದ ಪರಿ

ಪೂರ್ಣವಾಯಿತು. ಹಾಗೆಯೆ ತನ್ನ ವಿಚಾರಸರಣಿಯನ್ನು ಮುಂದೆ ಸಾಗಿಸಿದ ರಂಗರಾಯನು ಇಚ್ಛೆಯಿಲ್ಲದಿದ್ದರೂ ಭಾಮಿನಿಯನ್ನು ಸುಭದ್ರೆಗೂ ಸುಧಾರಕ ಸಮಾಜದ ಮತ್ತೆ ನಾಲ್ಕಾರು ಜನ ಹೆಂಗುಸರಿಗೂ ಒರೆಹಚ್ಚಿ ನೋಡಿದನು. ಅವನು ಈ ಪರೀಕ್ಷೆಯ ಫಲವಾಗಿ ಸಮಾಧಾನದ ಉಸಿರ್ಗರೆದು, ತನ್ನಲ್ಲಿಯೆ ಇಂತು ಅಂದುಕೊಳ್ಳಹತ್ತಿದನು: "ನನಗೆ ಹೆಣ್ಣು ಮಕ್ಕಳಿಲ್ಲ. ಮುಂದೆ ಹುಟ್ಟು ವರಾದರೆ, ತಮ್ಮನ್ನು ಹಡೆದವಳಂತೆಯೆ ಇರಲಿ. ಭಾಮಿನಿಯಂತೆಯೆ ಅವಳ ಮಕ್ಕಳು ಮಹದ್ಗುಣಮಂಡಿತೆಯರಾದರೆ, ನಾನು ದೇವರಿಗೆ ಧನ್ಯವಾದಗಳನ್ನ ರ್ಪಿಸುವೆನು." ರಂಗರಾಯನು ಅವಸರದಿಂದ ಕೈಕಾಲು-ಮೋರೆಗಳನ್ನು ತೊಳಕೊಂಡು, ಒರಿಸಿಕೊಂಡು ಭರದಿಂದ ನಡೆದು, ಲಾಯಬ್ರರಿ ಕೋಣೆಯನ್ನು ಪ್ರವೇಶಿಸಿ ಕುಳಿತುಕೊಂಡನು.

ಸೇವಕನು ಉಪಹಾರದ ಪದಾರ್ಥಗಳನ್ನು ತಂದಿರಿಸಿದನು. ರಂಗರಾಯನು ಈ ಸಾಮಾನುಗಳ ಕಡೆಗೆ ನೋಡಿದನು. ಮೊದಲಿನ ವಸ್ತುಗಳು-ನಡುವೆ ಕೆಲದಿನ ಅದೃಶ್ಯಗಳಾಗಿದ್ದ ಪದಾರ್ಥಗಳು ಇದ್ದವು. ಭಾಮಿನಿಯು ಬಂದಾಗಿನಿಂದ ಈ ಸಾಮಾನುಗಳ ಬದಲು ಉಂಡಿ, ಅವಲಕ್ಕಿ, ಸಜ್ಜಿಗೆ ಮೊದಲಾದವುಗಳನ್ನು ತಯಾರಿಸಹತ್ತಿದ್ದಳು, ಹಾಗು ಮುಂಜಾವಿನ ಚಹದ ಸಮಯದಲ್ಲಿ ಅವುಗಳನ್ನು ತಾನೆ ತಂದುಕೊಡುತ್ತಿದ್ದಳು, ಆದರೆ ಇಂದು ಅವಳು ಈ ಸಾಮಾನುಗಳನ್ನು ಬುದ್ಧಿಪೂರ್ವಕವಾಗಿ ಕಳುಹಿಕೊಟ್ಟಿದ್ದಳು; ಆದರೆ ರಂಗರಾಯನಿಗೆ ಈ ಪದಾರ್ಥಗಳು ಇಂದು ಪ್ರಿಯವಾಗಿ ತೋರಲಿಲ್ಲ ಹೆಂಡತಿಯ ಹಸ್ತದಿಂದ ಸಿದ್ಧವಾದ ಯಾವ ಪದಾರ್ಥವೂ ಇಲ್ಲದಿರುವುದನ್ನು ಕಂಡು, ಎದುರಿಗಿದ್ದ ಸಾಮಾನುಗಳನ್ನು ಮುಟ್ಟುವ ಮನಸ್ಸು ಅವನಿಗಾಗಲಿಲ್ಲ ರಂಗರಾಯನು ಒಂದು ಕಪ್ಪು ಚಹವನ್ನು ಮಾತ್ರ ಇಟ್ಟುಕೊಂಡು, ಉಳಿದ ದೆಲ್ಲವನ್ನು ತಿರುಗಿ ಕಳುಹಿಕೊಟ್ಟನು; ಹಾಗು ಈಗ್ಗೆ ಕೆಲವು ದಿನಗಳಿಂದ ನಿತ್ಯ ಪರಿಚಿತವಾಗಿದ್ದ ಕಾಲಸಪ್ಪಳವನ್ನು ಕೇಳುವ ಕುತೂಹಲತೆಯಿಂದ ಬಾಗಿಲ ಕಡೆಗೆ ನೋಡಹತ್ತಿದನು; ಮತ್ತು ಹೆಂಡತಿಯು ಬರುತ್ತಲೆ ಉಪಹಾರದ ಸಾಮಾನುಗನ್ನು ಸೇವಿಸದಿದ್ದುದರ ಕಾರಣವನ್ನು ಕಟುರೀತಿಯಿಂದ ಚ್ಚರಿಸುವ ಸಂಕಲ್ಪಮಾಡಿಕೊಂಡು ಕೆಲಕಾಲ ದಾರಿಯಕಾಯ್ದನು ಕೊನೆಗೆ ನಿರಾಶನಾಗಿ ಚಹವನ್ನು ಕುಡಿಯಹತ್ತಿದನು ಚಹವು ತಣ್ಣಗಾಗಿ ರುಚಿಹೀನವಾಗಿ ಹೋಗಿತ್ತು ಸೇವಕನು ಕಪ್ಪುಬಸಿಗಳನ್ನು ತಕ್ಕೊಂಡು ಹೋದನು ಆದರೆ ಆ ಪರಿಚಿತ ಪಾದಕಮಲಗಳು ಕಾಣಲಿಲ್ಲ—ಭಾಮಿನಿಯು ಆಗಮನವಾಗಲಿಲ್ಲ.

ಕ್ರಮವಾಗಿ ವೇಳೆಯಾಯಿತು. ರಂಗರಾಯನು ಸ್ನಾನಾಹಾರಗಳನ್ನು ತೀರಿಸಿಕೊಳ್ಳಲಿಕ್ಕೆ ಸಿದ್ಧನಾದನು. ಭಾಮಿನಿಯ ಕಾರ್ಯ-ಕಲಾಪಗಳು ದಿನದಂತೆ ನಡೆದಿದ್ದುವು. ರಂಗರಾಯನಿಗೆ ಎಲ್ಲಿಯೂ ಅವ್ಯವಸ್ಥೆಯು ಕಂಡುಬರಲಿಲ್ಲ. ಭಾಮಿನಿಯು ಊಟದ ಸಮಯದಲ್ಲಿ ರಂಗರಾಯನ ಒಳಿಗೆ ಬಂದಳು. ದಿನದಂತೆ ಮಾತಾಡಿದಳು. ಪತಿಗೆ ಆಗ್ರಹದಿಂದ ಊಟ ಮಾಡಿಸಿದಳು. ಭಾಮಿನಿಯು ಇಂದಿನ ಕಾರ್ಯಪದ್ಧತಿಯಲ್ಲಿ ಏನಾದರೂ ನೆಚ್ಚು ಕಡಿಮೆಯಾಗಿದೆಯೆಂದು ಮನೆಯಲ್ಲಿಯ ಊಟದವರಾರ ಲಕ್ಷ್ಯಕ್ಕೂ ಬರುವಂತಿರಲಿಲ್ಲ, ಆದರೆ ರಂಗರಾಯನು ಮಾತ್ರ ಇದನ್ನು ಕಂಡುಕೊಂಡನು. ಒಂದು ರಾತ್ರಿಯ ಅವಧಿಯಲ್ಲಿ ಹೆಂಡತಿಯ ಸ್ಥಿತಿಗತಿಗಳಲ್ಲಾದ ಬದಲಾವಣೆಗಳನ್ನು ಕಂಡು ಬೆರಗಾದನು.—ಬಹಿರಂಗದಲ್ಲಿ ಯಾವ ಸ್ಥಿತ್ಯಂತರವನ್ನೂ ತೋರದೆ, ಪ್ರಿಯ ವ್ಯಕ್ತಿಯು ಅಲ್ಪಾವಧಿಯಲ್ಲಿ ತನ್ನಿಂದ ಹೀಗೆ ದೂರ ಸರಿದು ನಿಂತುಕೊಂಡುದನ್ನು ನೋಡಿದ ಅವನು ಸ್ತಬ್ಧನಾಗಿ ಹೋದನು.

ಕಾಲೇಜಕ್ಕೆ ಹೊರಡುವ ಪೂರ್ವದಲ್ಲಿ ಬಟ್ಟೆಗಳನ್ನು ಧರಿಸಲಿಕ್ಕೆಂದು ಕೋಣೆಯಲ್ಲಿ ಕಾಲಿಟ್ಟ ರಂಗರಾಯನಿಗೆ ಮೊದಲು ಜಮಾಖರ್ಚಿನ ಆ ಪುಟ್ಟ ಪುಸ್ತಕವು ಕಣ್ಣಿಗೆ ಬಿತ್ತು. ರಂಗರಾಯನು ಗೇನಿಸಹತ್ತಿದನು. "ಈ ವಹಿಯು ನಿನ್ನಿನಿಂದಲೂ ಇಲ್ಲಿ ಬಿದ್ದುಕೊಂಡಿರಬಹುದು. ನಾನಿದನ್ನು ಲಕ್ಷಿಸಿರಲಿಕ್ಕಿಲ್ಲ; ಇಲ್ಲವೆ ನಾನು ಊಟಕ್ಕೆ ಹೋದಾಗ ಭಾಮಿನಿಯು ಇಂದಿಟ್ಟಿರಬಹುದು. ಇದೇನೋ! ಅಷ್ಟು ಸಂಭವನೀಯವಾಗಿ ತೋರುವದಿಲ್ಲ. ಇಂದು ತಿಂಗಳ ಕೊನೆಯ ದಿವಸವಲ್ಲ. ಹೀಗಿರಲು, ಈ ವಹಿಯು ಇಲ್ಲಿಗೇಕೆ ಬಂದಿರಬಹುದು?" ಹೀಗೆ ಆಲೋಚಿಸುತ್ತ ರಂಗರಾಯನು ಉಡುಗೆ-ತೊಡುಗೆಗಳನ್ನು ಧರಿಸಹತ್ತಿದನು. ಕುತೂಹಲತೆಯಿಂದ ಆ ಪುಸ್ತಕದ ಒಳಗೆ ಹೋಗಿ ನೋಡುತ್ತ ನಿಂತನು. ತುಸ ಹೊತ್ತಿನ ಮೇಲೆ ಕೈಯೊಳಗಿನ ಕೆಲಸವನ್ನು ತಡೆದು, ಪುಸ್ತಕದ ಪಾನುಗಳನ್ನು ತಿರುವುತ್ತ ಅವಲೋಕಿಸಿದನು. ಜಮಾಖರ್ಚು ಮೊದಲಿನಿಂದ ಕೊನೆಯ ವರೆಗೆ ಶುದ್ಧವೂ ಸ್ಪಷ್ಟವೂ ಆಗಿ ಬರೆಯಲ್ಪಟ್ಟಿತ್ತು. ನಿನ್ನಿನ ಸಾಯಂಕಾಲದ ವರೆಗಿನ ಜಮೆಯು ಹಾಗು ಖರ್ಚಿನ ರಕಮುಗಳ ಬೇರೀಜು ಮಾಡಿ, ಶಿಲ್ಲುಕು ತೋರಿಸಲ್ಪಟ್ಟಿತ್ತು. ಈ ಜಮಾಖರ್ಚಿನ ಬರಹವು ಯಾವ ದಿವಸ ಆರಂಭವಾಗಿತ್ತೋ ಅಂದು ರಂಗರಾಯನು ಮನೆಯಲ್ಲಿರಲಿಲ್ಲ. ಇಷ್ಟೇ ಅಲ್ಲ; ಮುಂಬಯಿಯಲ್ಲಿದ್ದನು. ಅರ್ಥಾತ್ ರಂಗರಾಯನು ಬರೆಯಲಾ

ರಂಭಿಸಿದವನಲ್ಲ; ಹೇಳಿ ಒದಗಿಸಿದವನಲ್ಲ. ಒಂದುವೇಳೆ ಜಮಾಖರ್ಚಿನ ಬರಹದ ಪರಿಸಮಾಪ್ತಿಯೂ ಇಂದೇ ಘಟಿಸುವುದಾದರೆ, ಇದರಲ್ಲಿಯೂ ರಂಗರಾಯನ ಅಂಗವಿರಲಿಲ್ಲ. ಯಾಕೆಂದರೆ ಬರೆಯಬೇಡೆಂದು ಇವನು ಸೂಚಿಸಿದವನಲ್ಲ. ಮುಖ್ಯವಾಗಿ ರಂಗರಾಯನಿಗೆ ಈ ಜಮಾಖರ್ಚಿನ ಪುಸ್ತಕವು ಅವಶ್ಯಕ ವಸ್ತುವಾಗಿರಲಿಲ್ಲ, ಆದರೂ ಇವನು ಮೊದಲನೆಯ ಪುಟದ ಬರಹವನ್ನು ಕ್ಷಣಕಾಲದ ವರೆಗೆ ನಿರ್ನಿಮೇಷನೇತ್ರನಾಗಿ ನೋಡುತ್ತ ನಿಂತುಬಿಟ್ಟನು. ಹೀಗೆ ನೋಡುತ್ತಿರುವ ಇವನಿಗೆ ನಡುವೆ ಕೆಲವು ದಿನ ಮಾತ್ರ ಮನೆಯಲ್ಲಿ ತಲೆದೋರಿದ್ದ ಜಮಾಖರ್ಚಿನ ಪುಸ್ತಕದ ಬಗ್ಗೆಯೂ, ಬರಹಗಾರಳ ವಿಷಯವಾಗಿಯೂ ಹಲವು ಬಗೆಯ ಯೋಚನೆಗಳು ತಲೆದೋರಹತ್ತಿದುವು.

ಕೆಲಹೊತ್ತಿನ ಮೇಲೆ ರಂಗರಾಯನು ಆ ಪುಸ್ತಕದಿಂದ ಸರಿದು ಬಂದು ಪೋಷಾಕ ಹಾಕಿಕೊಳ್ಳುವುದರಲ್ಲಿ ತೊಡಗಿದನು, ಆದರೂ ಆಲೋಚನೆಯು ಇವನನ್ನು ಬಿಡಲಿಲ್ಲ. ಇವನು ಮನಸ್ಸಿನಲ್ಲಿಯೇ ಇಂತು ಅಂದುಕೊಳ್ಳಹತ್ತಿದನು:“ಈ ಸಂಸಾರದಲ್ಲಿ ಯಾವ ವಸ್ತುವಿಗೂ, ಯಾವ ಸಂಗತಿಗೂ ಹೆಚ್ಚು ಮಹತ್ವ ಕೊಟ್ಟು ಉಪಯೋಗವಿಲ್ಲ. ಉದಯಿಸುವವು-ಕೆಲಕಾಲವಿರುವವು. ಕೊನೆಯಲ್ಲಿ ಅಸ್ತವಾಗುವವು. ಈ ಆಗು-ಹೋಗುಗಳನ್ನು ನಿರಪೇಕ್ಷಬುದ್ಧಿಯಿಂದ ನಿರೀಕ್ಷಿಸುತ್ತಿರಬೇಕಲ್ಲದೆ, ಮಮತ್ವ ಹಚ್ಚಿಕೊಂಡು ಒಡೆದಾಡುವುದರಲ್ಲಿ ಸುಖವಿಲ್ಲ.”

ರಂಗರಾಯನು ಕಾಲೇಜಕ್ಕೆ ಹೊರಡುವ ಮೊದಲು ಎಷ್ಟೆ ಇಚ್ಛೆಯಿದ್ದರೂ, ಭಾಮಿನಿಯನ್ನು ಕರೆದು ಮಾತಾಡಿಸುವ ಧೈರ್ಯವನ್ನು ಹೊಂದಲಿಲ್ಲ. ಅಪರಿಜ್ಞಾತ ಭವಿಷ್ಯತ್ತಿನ ಬಗ್ಗೆ ಅವನು ನೂರಾರು ಕಲ್ಪನೆಗಳನ್ನು ಕಲ್ಪಿಸಹತ್ತಿದನು ಮಾತ್ರ—ಆದರೆ ಅನಿಶ್ಚಯದ ಆತಂಕೆಯನ್ನು ಸುನಿಶ್ಚಿತ ದುರ್ಘಟನೆಯಲ್ಲಿ ದೃಢಪಡಿಸಿಕೊಳ್ಳುವ ಸಾಹಸವು ಇವನಿಗಾಗಲಿಲ್ಲ.

## ೧೨

ಕಾಲೇಜದ ಕೆಲಸವು ಮುಗಿಯುತ್ತಲೆ ರಂಗರಾಯನು ಮನೆಗೆ ಹೊರಡದೆ ಸುಭದ್ರೆಯ ಮನೆಯ ಕಡೆಗೆ ನಡೆದನು. ಭೀಮರಾಯನು ಮನೆಯಲ್ಲಿಯೆ ಇದ್ದನು. ಈ ಅವಧಿಯಲ್ಲಿ ದಂಪತಿಗಳಲ್ಲಿ ಒಪ್ಪಂದವಾಗಿ ಹೋಗಿತ್ತು. ಭೀಮ

ರಾಯನೂ ಸುಭದ್ರೆಯೂ ಚಕ್ಕಂದದಿಂದ ಮಾತಾಡುತ್ತ ಕುಳಿತಿದ್ದರು. ರಂಗರಾಯನು ಈ ಸ್ಥಿತಿಯನ್ನು ನೋಡಿ ಸಂತುಷ್ಟನಾಗಿ: "ತಂಗಿ, ರಾಮುನನ್ನು ಕರೆಕಳುಹಲಿಲ್ಲವಲ್ಲ?" ಎಂದು ಕೇಳಿದನು.

ಸುಭದ್ರೆಯು ಉತ್ತರಕೊಡತಕ್ಕವಳಿದ್ದಳು; ಭೀಮರಾಯನು ಹೆಂಡತಿಗೆ ಮಾತಾಡಲವಕಾಶ ಕೊಡದೆ: "ನಿನ್ನೆ ಆನೆಯನ್ನು ಕೊಂಡ ವ್ಯಕ್ತಿಯು ಈಗ ಇಲ್ಲಿಲ್ಲ," ಎಂದು ನುಡಿದನು.

"ಬಲ್ಕೆ ಗೂಢವಾಗಿ ಮಾತಾಡಿದೆ! ವಿವರಣೆಯನ್ನಷ್ಟು ಮಾಡಿಬಿಡು!" ರಂಗರಾಯನು ನುಡಿದನು

ನೀನು ಕತೆಯನ್ನು ಕೇಳಿಲ್ಲವೆ? ಕೇಳದಿದ್ದರೆ, ನಾನೀಗ ಸಂಕ್ಷೇಪವಾಗಿ ಹೇಳುವೆನು, ಕೇಳು ನೆರೆಗುಡಕನೊಬ್ಬನು ಮದಿರೆಯ ಮದದಲ್ಲಿ ಅರಸನ ಆನೆಯನ್ನು ಕೊಳ್ಳಬಯಸಿದನು; ಆನೆಯನ್ನು ತಕ್ಕೊಂಡು ಹೋಗುತ್ತಿರುವ ರಾಜಸೇವಕರಿಗೆ ಮನಬಂದಂತೆ ಮಾತಾಡಿದನು. ಈ ಸುದ್ದಿಯು ರಾಜನಿಗೆ ತಿಳಿಯಿತು. ರಾಜನು ಮರುದಿನದ ದರ್ಬಾರದಲ್ಲಿ ನೆರೆಗುಡಕನನ್ನು ಕರಸಿಕೊಂಡು ವಿಚಾರಿಸಿದನು. ಇದಕ್ಕೆ ಉತ್ತರವಾಗಿ ಆ ನೆರೆಗುಡಕನು ಕೈಜೋಡಿಸಿಕೊಂಡು ವಿನಯದಿಂದ ಹೇಳಿದ್ದೇನಂದರೆ: "ನಿನ್ನೆ ದೊರೆಗಳವರ ಆನೆಯನ್ನು ಕೊಳ್ಳಬಯಸಿದವನು ಬೇರೆ. ಈಗ ನಿಮ್ಮ ಮುಂದೆ ನಿಂತಿರುವ ನಾನು ಬೇರೆ. ನಿನ್ನೆ ಅವನು ನನ್ನಲ್ಲಿ ವಾಸವಾಗಿದ್ದನು—ಅವನೂ ನಾನೂ ಏಕತ್ರಿತರಾಗಿದ್ದೆವು. ಇಂದು ಅವನು ನನ್ನಿಂದ ಬೇರೆಯಾಗಿ ಹೋಗಿದ್ದಾನೆ ಈಗ ನನಗೆ ನಿಮ್ಮ ಆನೆಯಿಂದ ಪ್ರಯೋಜನವಿಲ್ಲ—ಕಾರಣ ನನಗೆ ನಿಮ್ಮ ಆನೆಯು ಬೇಡ. ನಿನ್ನೆ ಆನೆಯನ್ನು ಕೊಳ್ಳಬಯಸಿದ ವ್ಯಕ್ತಿಯು ಈಗ ಇಲ್ಲಿಲ್ಲ.'' ಎಂದು ಹೇಳಿ, ಭೀಮರಾಯನು ತನ್ನ ರಸಿಕತೆಗೆ ತಾನೇ ನಗಹತ್ತಿದನು. ನಗೆಯು ನಿಂತ ಬಳಿಕ ಮತ್ತೆ ಹೇಳಹತ್ತಿದನು: "ಈ ಕತೆಯನ್ನು ನಿನ್ನ ಹೆಂಡತಿಗೆ ಹೇಳಿ, ಅವಳ ಕೋಪವನ್ನು ಶಾಂತಗೊಳಿಸು. ನಿನ್ನೆ ರಾಮುನನ್ನು ಸಂರಕ್ಷಿಸ ಬಯಸಿದವಳು ಈಗ ಈ ಸ್ಥಳದಲ್ಲಿಲ್ಲ. ಅವಳು ನಿನ್ನೆ ಕ್ಷಣಕಾಲ ಮಾತ್ರ ನಿನ್ನ ಸಹೋದರಿಯಲ್ಲಿ ವಾಸಿಸಿ ಅಂತರ್ಧಾನ ಹೊಂದಿದ್ದಾಳೆ. ಬಾಲಕನಿಗೆ ತಾಯಿಗಿಂತ ಅತ್ತೆಯ ಸಂರಕ್ಷಣೆಯು ಪ್ರಿಯಕರವಲ್ಲ; ಹಿತಕರವೂ ಅಲ್ಲ ಒಂದುವೇಳೆ ನಿನ್ನ ಈ ಸಹಜಾತೆಯು ಯಾವುದೊಂದು ಪ್ರಾಣಿಯನ್ನು ಸಂರಕ್ಷಿಸಿಯೇ ತೀರುವೆನೆಂದು ಹಟಹಿಡಿದರೆ, ನಾನು ಇವಳಿಗೆ ಸಾಲಮಾಡಿಯಾದರೂ ಒಂದು ಆನೆಯನ್ನು ಕೊಂಡು

ಕೊಡುವೆನು. ಅದನ್ನವಳು ಸಂರಕ್ಷಿಸಿ ಸಂತುಷ್ಟಳಾಗಲಿ'' ಭೀಮರಾಯನು ರಂಗರಾಯನ ಕಡೆಗೆ ಮೋರೆ ಮಾಡಿ ಕಣ್ಣು ಚಿವುಟಿ ನಗಹತ್ತಿದನು.

ರಂಗರಾಯನು ಭೀಮರಾಯನ ಈ ನಗುವಿನ ಸಹಕಾರಿಯಾಗಲಿಲ್ಲ-ನಗಲಿಲ್ಲ. ಯಾಕೆಂದರೆ, ಈ ಚೇಷ್ಟೆಯು ಸುಭದ್ರೆಯ ಸುಪ್ತಕ್ರೋಧವನ್ನು ಜಾಗ್ರತಗೊಳಿಸಿದರೆ, ಅನರ್ಥವೊದಗಬಹುದೆಂದು ಭಯಗೊಂಡಿದ್ದನು. ಕಾರಣ ಇವನು ಪ್ರಯತ್ನಪೂರ್ವಕ ತನ್ನ ನಗುವನ್ನು ತಡೆದುಕೊಂಡನು.

"ರಂಗ, ನಿನ್ನ ಮೋರೆಯ ಮೇಲೆ ಕಳೆಯಿಲ್ಲದಾಗಿದೆ. ಮತ್ತೇನಾದರೂ ವಿಶೇಷ ಸಂಗತಿ ಜರಗಿದೆಯೆ?'' ಭೀಮರಾಯನು ಕೇಳಿದನು.

"ನಿನ್ನಿನ ಸುಭದ್ರೆಯ ಮಾತುಗಳಿಂದ ರಾಮನ ವಿಷಯದಲ್ಲಿ ನಾನು ತುಂಬಾ ನಿಶ್ಚಿಂತನಾಗಿದ್ದೆನು, ಆದರೆ ಇವಳು ಇಂದು ಉತ್ಸಾಹವಿಲ್ಲದವಳಾಗಿದ್ದಾಳೆ. ಇವಳಿಂದ ಆ ಕೆಲಸವಾಗುವದಿಲ್ಲೆಂದ ಬಳಿಕ, ನಾನು ರಾಮನ ವಿಷಯವಾಗಿ ಬೇರೊಂದು ವ್ಯವಸ್ಥೆಯನ್ನು ಗೊತ್ತು ಮಾಡಲಿಕ್ಕೆ ಬೇಕಾಗಿದೆ''

"ಮಗನ ಸಂರಕ್ಷಣೆಯ ವಿಷಯದಲ್ಲಿ ನೀನು ನಿನ್ನ ಈ ಭಾವಿಕ ಭಾರ್ಯೆಯನ್ನು ನಂಬಲಾರದವನಾಗಿರುವೆ........''

"ನಿನ್ನ ಈ ಕಠೋರನುಡಿಯ ಉತ್ತರವನ್ನು ಕೊಡುವ ಮನಸ್ಸು ನನಗಿಲ್ಲದಾಗಿದೆ, ಆದರೂ ನಾನು ನಿನಗೆ ಭಾಮಿನಿಯು ಬೇಗನೆ ಇಲ್ಲಿಂದ ಹೊರಟು ಹೋಗತಕ್ಕವಳಿರುವಳೆಂಬದನ್ನು ಮಾತ್ರ ಸೂಚಿಸದಿರಲಾರೆನು.''

"ಹೊರಟು ಹೋಗುವಳೆ? ಎಲ್ಲಿಗೆ?'' ಭೀಮರಾಯನು ಕೇಳಿದನು.

"ಎಲ್ಲಿಂದ ಬಂದಿರುವಳೋ ಅಲ್ಲಿಗೆ?-ತನ್ನ ಅಣ್ಣಂದಿರ ಮನೆಗೆ ಹೋಗುವಳಂತೆ!'' ರಂಗರಾಯನು ನುಡಿದನು.

ಭೀಮರಾಯನ ಮುಖವು ಅತಿಶಯ ಗಂಭೀರವಾಯಿತು. ಇವನು ತನ್ನ ಸೊಂಗತಿಯ ಮೋರೆಯನ್ನು ದೃಷ್ಟಿಸಿ, "ರಂಗ, ಇಂತಹದೊಂದು ದುರ್ಘಟನೆಯು ಒದಗಬಹುದೆಂದು ನಾನು ಮೊದಲೆ ತರ್ಕಿಸಿ ಭಯಗೊಂಡಿದ್ದೆನು,'' ಎಂದು ನುಡಿದನು.

ಈ ವರೆಗೆ ಮಾತಾಡದೆ ಸುಮ್ಮನೆ ಕುಳಿತಿದ್ದ ಸುಭದ್ರೆಯು, ಪತಿಯ ಮಾತಿನ ಇಂಗಿತವನ್ನರಿತಳು. ಉಂಟಾದ ಕೋಪವನ್ನು ತೋರಗೊಡದೆ, ಸಹಜಸ್ವರದಿಂದ ಮಾತಾಡತೊಡಗಿದಳು: "ಅಣ್ಣಾ, ನನ್ನ ಮಾತುಗಳಿಂದಲೆ ನೀನು ಭಾಮಿನಿಯನ್ನು ತೌರುಮನೆಗೆ ಕಳುಹಬೇಕೆಂದಿರುವಿಯಾ? ಯಾವ

ಕಾರಣದಿಂದಲೇ ನೀನು ಭಾಮಿನಿಯನ್ನು ಹೊರದೂಡಬಯಿಸಿರಲೊಲ್ಲೆಯೇಕೆ, ನಾನು ಬೇಡೆನ್ನುವದಿಲ್ಲ; ಆದರೆ ಇದರ ಪರಿಣಾಮವು ಒಳಿತಾಗಲಿಕ್ಕಿಲ್ಲವೆಂದು ನನಗೆ ಅನಿಸಹತ್ತಿದೆ. ಯಾಕೆಂದರೆ, ಇದಕ್ಕಾಗಿ ನೀವಿಬ್ಬರೂ ಮುಂದೆ ಪಶ್ಚಾತ್ತಾಪಕ್ಕೆ ಗುರಿಯಾಗುವ ಸಂಭವವಿದೆ ''

ರಂಗರಾಯನು ಕಳೆದ ಒಂದೆರಡು ದಿನ ತನ್ನ ಮನೆಯಲ್ಲಿ ನಡೆದ ವಿಶೇಷ ಸಂಗತಿಗಳನ್ನು ವಿವರಿಸಿ, ಬಳಿಕ ಇಂತು ಮಾತಾಡತೊಡಗಿದನು: "ನಾನು ಅವಳಿಗೆ ತೌರುಮನೆಗೆ ಹೋಗೆಂದು ಹೇಳಿದವನಲ್ಲ ಅವಳಾಗಿಯೇ ಹೋಗುವೆನೆಂದೆನ್ನಲು ಬೇಡವೆಂದು ನುಡಿದವನೂ ಅಲ್ಲ ಅವಳು ಹೀಗೆ ಮತ್ತೆ ತೌರುಮನೆಗೆ ಹೋಗುವಳಾದರೆ, ಬಂಧು-ಬಾಂಧವರೆಲ್ಲರು ಈ ವಿಷಯವನ್ನೆತ್ತಿ ಚರ್ಚಿಸಹತ್ತುವರು. ಈ ಚರ್ಚೆಯಲ್ಲಿ ನನ್ನ ಸ್ತುತಿಗೆ ಅವಕಾಶವಿಲ್ಲೆಂಬುದನ್ನು ನಾನು ಬಲ್ಲೆನಾದರೂ, ಭಾಮಿನಿಯನ್ನು ತಡೆದಿರಿಸಿಕೊಳ್ಳಲಾರದವನಾಗಿರುವೆನು ಮೊದಲು ನನ್ನಿಂದ ಒಂದು ದೊಡ್ಡ ತಪ್ಪಾಗಿತ್ತು. ಅದನ್ನು ಸುಧಾರಿಸಿಕೊಳ್ಳುವದಕ್ಕಾಗಿ ನಾನು ಭಾಮಿನಿಯನ್ನು ಕರಿಸಿಕೊಂಡಿದ್ದನು. ಅವಳು ನನ್ನಿಚ್ಛೆಯಂತೆ ನಡೆದು ತನ್ನ ಸ್ಥಳವನ್ನು ಕಾಯ್ದುಕೊಳ್ಳಬೇಕಾಗಿತ್ತು; ಆದರೆ ಅವಳು ಹೀಗೆ ಮಾತಾಡದೆ, ತಾನೇ ತಾನಾಗಿ ನಾನು ತವರುಮನೆಗೆ ಹೋಗುವೆನೆಂದು ಹಟ ಹಿಡಿದಿರುವುದು ಬಾದು ದೃಷ್ಟಿಯಿಂದ ನನ್ನ ಮಹದ್ಭಾಗ್ಯವೆಂದೇ ನಾನು ಭಾವಿಸಿದ್ದೇನೆ. ಅವಳಿಗೆ ಈ ಬುದ್ಧಿಯನ್ನಿತ್ತುದಕ್ಕಾಗಿ ನಾನು ದೇವರಿಗೆ ಮನಃಪೂರ್ವಕ ಧನ್ಯವಾದಗಳನ್ನರ್ಪಿಸುವೆನು ''

ಸುಭದ್ರೆಯು ಈ ಮಾತಿಗೆ ಉತ್ತರ ಕೊಡಬಯಿಸದೆ ಸುಮ್ಮನಿದ್ದಳು. ಭೀಮರಾಯನೂ ಪ್ರತಿಮಾತಾಡಲಿಲ್ಲ. ರಂಗರಾಯನು ಮತ್ತೆ ಹೀಗೆ ಹೇಳಹತ್ತಿದನು: "ನಿಮಗೆ ಈ ಎಲ್ಲ ಸಂಗತಿಯನ್ನು ತಿಳುಹುವುದು ಅವಶ್ಯವೆಂದು ನನಗೆ ಅನಿಸಿದ್ದರಿಂದ ನಾನು ಇಂದು ಈ ಸಮಯದಲ್ಲಿ ಇಲ್ಲಿಗೆ ಬಂದಿರುವೆನು. ಎಲ್ಲ ವಿಷಯಗಳನ್ನು ಸರಿಯಾಗಿ ತಿಳಿದಿದ್ದ ನೀವು ನನಗೆ ದೋಷಕೊಡಲಾರಿರೆಂದೇ ನಾನು ಭಾವಿಸಿರುವೆನು ''

ಭೀಮರಾಯನು ಜೋರಿನಿಂದ ತಲೆಯುಲ್ಲಾಡಿಸಿ ಮಾತಾಡತೊಡಗಿದನು:- "ಇಲ್ಲ ನಾವು ನಿನಗೆ ದೋಷಕೊಡುವುದಿಲ್ಲ. ಇರಲಿ ರಂಗ, ಮಧ್ವರಾಯರ ಮಗಳನ್ನು ನಿನಗೆ ಕೊಡುವ ಆಲೋಚನೆಯು ನಡೆದಿತ್ತಷ್ಟೆ? ಮಧ್ವರಾಯನೇ ಆಗಲಿ, ಅವನ ಪತಿಯಿಂದ ಮತ್ತಾರೇ ಆಗಲಿ ನಿನ್ನ ಬಳಿಗೆ ಬಂದಿದ್ದರೇನು?''

ಭಾಮಿನಿಯು ವೃಂದಾವನದ ಪೂಜೆ ಮಾಡಿಕೊಂಡು ಅದೇ ಬಂದು ನಿಂತಿದ್ದಳು. ಮನೆಯಲ್ಲಿ ತುಳಸಿಯ ಕಟ್ಟೆಯಿರಲಿಲ್ಲ. ನೆರೆಮನೆಯಲ್ಲಿಯ ವೃಂದಾವನಕ್ಕೆ ಹೋಗಿ ಪೂಜೆ ಮಾಡಿಕೊಂಡು ಬರುವುದು ಭಾಮಿನಿಯ ನಿತ್ಯದ ಪದ್ಧತಿಯಾಗಿತ್ತು. ಇವಳು ಬಾಗಿಲ ಕಡೆಗೆ ನೋಡಿ "ಬರ್ರಿ" ಎಂದು ಉಚ್ಚರಿಸಿದಳು.

ಭೀಮರಾಯನು ಅಡುಗೆಯ ಮನೆಯಲ್ಲಿ ಹೊಕ್ಕು ಭಾಮಿನಿಯನ್ನು ನೋಡಿದನು. ಮಾತಾಡಹತ್ತಿದನು: "ತಂಗಿ, ಈ ಅವೇಳೆಯಲ್ಲಿ ಬಂದು, ನಿನಗೆ ತೊಂದರೆ ಕೊಟ್ಟಂತಾಯಿತು. ನೀನು ಮತ್ತೆ ತೌರುಮನೆಗೆ ಹೊರಡುವ ಸುದ್ದಿಯನ್ನು ಕೇಳಿ ತಡೆಯಲಾರದೆ ಬಂದೆನು. ನೀನು ಹೀಗೆ ಅಕಸ್ಮಾತ್ತಾಗಿ ತೌರುಮನೆಗೆ ಹೊರಡುವುದರ ಕಾರಣವೇನು? ಅಪ್ಪನಿಗೆ ಜಡ್ಡಾಗಿದೆಯೇ?"

"ಅಪ್ಪನು ಜೀವಿಸಿಲ್ಲ. ಸತ್ತು ಸ್ವರ್ಗದಲ್ಲಿರುವನು!"

"ಹೀಗೋ! ಹಾಗಾದರೆ ಅವ್ವನಿಗೆ ಅಜಾರಿಯಾಗಿದೆಯೇನು?"

"ಅವಳೂ ಜೀವಿಸಿಲ್ಲ. ಅಪ್ಪನಿಗಿಂತ ಮೊದಲೇ ಸತ್ತು ಹೋಗಿದ್ದಾಳೆ!"

ಭೀಮರಾಯನು ಅತಿಶಯ ವಿಸ್ಮಯವನ್ನು ಪ್ರಕಟಿಸಿ ಇಂತು ಮಾತಾಡಿದನು: "ಹಾಗಾದರೆ ನೀನೆಲ್ಲಿಗೆ ಹೋಗುವೆ? ಅಲ್ಲಿ ಯಾರಿರುವರು? ತಾಯ್ತಂದೆಗಳಿಲ್ಲದ ಮನೆಗೆ ನೀನು ಈ ಸಮಯದಲ್ಲಿ ನೀನು ಹೋಗಬಯಸುವದು ಎಷ್ಟು ಮಾತ್ರಕ್ಕೂ ವಿಹಿತವಲ್ಲ. ರಂಗರಾಯನ ಅಭಿಪ್ರಾಯವು ಹೇಗೇ ಇರಲಿ, ನಾನಂತೂ ಈ ನಿನ್ನ ಸಂಕಲ್ಪವನ್ನು ಸಮರ್ಥಿಸಲಾರೆನು!"

ಭಾಮಿನಿಯು ಕೆಳಮೋರೆ ಮಾಡಿಕೊಂಡು ನಸುನಗೆಯಿಂದ: "ನೀವು ನನಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಡಲಾರಿರಾ?" ಎಂದು ಕೇಳಿದಳು.

"ಇಲ್ಲ. ಎಷ್ಟು ಮಾತ್ರವೂ ನಾನು ಒಪ್ಪಿಗೆಯನ್ನು ಕೊಡಲಾರೆನು!"

"ಅಣ್ಣಾ, ನನಗೆ ಇದುವರೆಗೆ ಮೂವರು ಅಣ್ಣಂದಿರಿದ್ದರು. ಈಗ ನಾಲ್ಕನೆಯ ಅಣ್ಣನೊಬ್ಬನಿರುವನೆಂದು ಭಾವಿಸಿರುವೆನು. ನೀವು ಈ ನನ್ನ ನಾಲ್ಕನೆಯ ಅಣ್ಣಂದಿರು. ನಾನಿದುವರೆಗೆ ಅಣ್ಣಂದಿರ ಮನೆಯಲ್ಲಿಯೆ ಇದ್ದವಳು. ಅಣ್ಣಂದಿರ ಅಧಿಕಾರಕ್ಕೊಳಗಾಗಿದ್ದು ನನ್ನ ಈ ವರೆಗಿನ ಜೀವಿತದ ಬಹು ಭಾಗವನ್ನು ಕಳೆದವಳು. ಅಣ್ಣಂದಿರ ಸಂಸಾರದಲ್ಲಿ ನಾನು ಆತ್ಮಾಭಿಮಾನಕ್ಕೆ ಆಘಾತವನ್ನನುಭವಿಸಿದವಳಲ್ಲ; ಆಚಾರ-ವಿಚಾರಗಳಿಗೆ ಅಮರ್ಯಾದೆಯನ್ನು ಹೊಂದಿದವಳಲ್ಲ."

"ತಂಗೀ, ಒಂದುವೇಳೆ ನೀನು ಈಗ ತೌರುಮನೆಗೆ ಹೋಗುವುದು ಅತ್ಯವಶ್ಯವಾಗಿದ್ದರೆ ಹೋಗಬಹುದು. ನಾನು ಬೇಡೆನ್ನುವದಿಲ್ಲ; ಆದರೆ ತಿರುಗಿ ಎಂದು ಬರುವೆಯೆಂಬುದನ್ನು ಸ್ಪಷ್ಟವಾಗಿ ಹೇಳಿಟ್ಟು ಹೋಗು. ತಿರುಗಿ ಬರುವ ಸಮಯವನ್ನು ಸೂಚಿಸಿದ ಹೊರತು, ನಾನು ನಿನ್ನ ಈ ಹೊರಡುವಿಕೆಗೆ ಅನುಮತಿ ಕೊಡಲಾರೆನು."

ಭಾಮಿನಿಯು ಮಾತಾಡದೆ ಸುಮ್ಮನಿದ್ದಳು. ಭೀಮರಾಯನು "ರಾಮನ ಗತಿ ಏನು?" ಎಂದು ಕೇಳಿದನು.

"ಅವನ ಅತ್ತೆ ಇದ್ದಾಳೆ."

"ಅವಳು ನನ್ನ ಹೆಂಡತಿಯು. ನಾನು ಅವಳ ಸಲುವಾಗಿ ನಿನ್ನ ಹತ್ತಿರ ಕ್ಷಮೆಬೇಡಿಕೊಳ್ಳುವೆನು."

ಭಾಮಿನಿಯು ಮೌನದಿಂದಿದ್ದಳು. ಭೀಮರಾಯನು "ಕ್ಷಮಿಸುವದು ಸಾಧ್ಯವಿಲ್ಲವೆ?" ಎಂದು ಕೇಳಿದನು. ಆದರೂ ಭಾಮಿನಿಯು ಮಾತಾಡಲಿಲ್ಲ. ಭೀಮರಾಯನು ಕೆಲಕಾಲ ಉತ್ತರದ ಮಾರ್ಗಪ್ರತೀಕ್ಷೆ ಮಾಡಿ, ನಿಟ್ಟುಸಿರಬಿಟ್ಟು ಮೆಲ್ಲಮೆಲ್ಲನೆ ಮಾತಾಡಹತ್ತಿದನು: "ಜಗತ್ತಿನಲ್ಲಿ ಅಪರಾಧವಿದ್ದ ಬಳಿಕ ಅದಕ್ಕೆ ಕ್ಷಮೆಯೂ ಇರಲಿಕ್ಕೆ ಬೇಕು. ಅವಳ ಅಪರಾಧಕ್ಕೆ ಕ್ಷಮೆಯು ಏಕೆ ಇಲ್ಲವೆಂಬುದನ್ನು ಹೇಳಲಾರೆಯಾ?"

"ಒಬ್ಬನು ಮಾಡಿದ ಅಪರಾಧದ ಶಿಕ್ಷೆಯನ್ನು ಮತ್ತೊಬ್ಬನು ಅನುಭವಿಸಬೇಕಾಗುತ್ತಿರುವುದೇಕೆ? ಹೀಗಾಗುವುದನ್ನು ನಾನು ಬಲ್ಲೆನು, ಆದರೆ ಏಕೆ ಹೀಗಾಗುತ್ತಿದೆಯೆಂಬುದನ್ನು ಮಾತ್ರ ಅರಿಯೆನು." ಭಾಮಿನಿಯು ನುಡಿದಳು.

"ಎಂದು ಹೊರಡುವೆ?" ಭೀಮರಾಯನು ಕೇಳಿದನು.

"ಅಣ್ಣನು ಕರೆಯ ಬಂದ ಬಳಿಕ ಹೋಗುವೆನು. ಅವನು ನಾಳೆ ಬಂದರೂ ಬರಬಹುದು."

ಭೀಮರಾಯನು ಕ್ಷಣಕಾಲ ಸುಮ್ಮನಿದ್ದನು. ಬಳಿಕ ಮತ್ತೆ ಮಾತಾಡಹತ್ತಿದನು: "ತಂಗಿ, ಒಂದು ಮಾತನ್ನು ನಿನ್ನ ಮುಂದೆ ಎಂದೂ ಒಡನುಡಿಯಬಾರದೆಂದು ಸಂಕಲ್ಪಿಸಿಕೊಂಡಿದ್ದೆನು, ಆದರೆ ಇಂದು ಆ ಮಾತನ್ನು ನಿನ್ನ ಮುಂದೆ ಹೇಳದಿದ್ದರೆ, ನಾನು ಅಪರಾಧಿಯಾಗಿ ಹೋಗುವೆನೆಂದು ನನಗೆ ಅನಿಸುತ್ತಿದೆ. ಕಾರಣ ಅದನ್ನು ಈಗ ನಿನಗೆ ಹೇಳಿಡುವೆನು. ನೀನು ಈ ಮನೆಗೆ ಬರುವ ಮೊದಲು ಮತ್ತೊಬ್ಬಳು ಈ ಮನೆಗೆ ಒಡತಿಯಾಗಿ ಬರುವ ಆಲೋಚನೆಯು

ನಡೆದಿತ್ತು. ಆ ಆಲೋಚನೆಯು ಈಗಲೂ ಸಂಪೂರ್ಣವಾಗಿ ಮಾಗಿಲ್ಲ."

"ಅಣ್ಣಾ, ನಾವಿದನ್ನು ಒಲ್ಲೆನು"

"ಹೀಗಿದ್ದು ನೀನು ಈ ಮನೆಯನ್ನು ಬಿಟ್ಟು ಹೋಗಲಿಕ್ಕೆ ಮನಸ್ಸು ಮಾಡಿರುವಿಯಾ? ನೀನಾಗಿಯೇ ಆ ಆಲೋಚನೆಯನ್ನು ಕಾರ್ಯದಲ್ಲಿ ಪರಿಣಮಿಸಲಿಕ್ಕೆ ಸಹಾಯಮಾಡುವೆಯಾ? ನೀನು ಕೋಪದ ಅಧೀನಳಾಗಿ ಈ ಮನೆಯನ್ನು ಬಿಟ್ಟುಹೋಗಿ, ನಡೆದಿದ್ದ ಆ ಒಳಸಂಚು ಜಯಶಾಲಿಯಾಗುವಂತೆ.........."

ಭಾಮಿನಿಯು ಭೀಮರಾಯನನ್ನು ಮುಂದೆ ಮಾತಾಡಗೊಡದೆ ನಿರ್ಧಾರದಿಂದ ಹೀಗೆ ಮಾತಾಡಹತ್ತಿದಳು: "ಅಣ್ಣಾ, ಆ ಒಳಸಂಚು ಜಯಶೀಲವಾಗಲಿ ಇಲ್ಲವೆ ಅಪಜಯ ಹೊಂದಲಿ, ನಾನು ಯಾವುದನ್ನೂ ಲೆಕ್ಕಿಸುವದಿಲ್ಲ! ನೀವು ನನ್ನನ್ನು ಕ್ಷಮಿಸಿರಿ!" ಭಾಮಿನಿಯು ಕೈಜೋಡಿಸಿ ಭೀಮರಾಯನ ಮೋರೆಯ ಕಡೆಗೆ ನೋಡಿದಳು.

ಈ ದೃಷ್ಟಿಯ ಎದುರಿನಲ್ಲಿ ಭೀಮರಾಯನು ನೀರವವಾಗಿ ನೋಡುತ್ತ ನಿಂತನು

---

## ೧೩

...

ರಂಗರಾಯನು ಹೆಂಡತಿಯೊಡನೆ ಮಾತಾಡುವದನ್ನು ಬಹಳವಾಗಿ ಕಡಿಮೆ ಮಾಡಿದನು, ಆದರೆ ಭಾಮಿನಿಯು ಹೀಗೆ ಬುದ್ಧಿಪೂರ್ವಕ ಮಾತ ನಿಲ್ಲಿಸುವ ಮನಸ್ಸು ಮಾಡಲಿಲ್ಲ ಇವಳು ಮಾತಗುಳಿಯಾಗಿರದಿದ್ದರೂ, ಪ್ರಸಂಗೋಚಿತವಾಗಿ ಪತಿಯೊಡನೆ ಮಾತಾಡುತ್ತಿದ್ದಳು. ರಂಗರಾಯನು ಎಷ್ಟು ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸಿದರೂ, ಭಾಮಿನಿಯ ಬಹಿರಂಗದ ಆಚರಣೆಯಲ್ಲಿ ಲೇಶಮಾತ್ರವೂ ಪರಿವರ್ತನೆಯಾದುದನ್ನು ಕಂಡುಕೊಳ್ಳಲಿಲ್ಲ. ಭಾಮಿನಿಯು ಸಂಸಾರದ ಎಲ್ಲ ಕೆಲಸಗಳನ್ನು ಹಿಂದಿನಂತೆ ಈಗಲೂ ಒಳ್ಳೆ ದಕ್ಷತೆಯಿಂದ ಹಾಗು ವ್ಯವಸ್ಥೆಯಿಂದ ಸಾಗಿಸಿದ್ದಳು ಇವಳು ತಾನು ಮಾಡುವ ಕ್ರಿಯಾಪದ್ಧತಿಯೇ ಆಗಲಿ, ಸೇವಕರಿಂದ ಮಾಡಿಸುವ ಕೆಲಸಗಳಲ್ಲಿಯೇ ಆಗಲಿ ಸದಾ ಜಾಗ್ರತ ದೃಷ್ಟಿಯನ್ನಿರಿಸುತ್ತಿದ್ದಳು ಸೇವಕರ ಕೆಲಸದಲ್ಲಿ ಕೊಂಚ ದೋಷ ಘಟಿಸಿದರೂ ಅದು ಭಾಮಿನಿಯ ದೃಷ್ಟಿಗೋಚರವಾಗದಿರುತ್ತಿರಲಿಲ್ಲ ರಂಗರಾಯನು ಇಂದು ಮುಂಜಾವಿನಲ್ಲಿ ಭಾಮಿನಿಯು ಚಾಕರನ ಒಂದು ಸಣ್ಣ ತಪ್ಪ

ಗಾಗಿ ಅವನಿಗೆ ಸಿಟ್ಟು ಮಾಡುತ್ತಿರುವುದನ್ನು ಕೇಳಿದ್ದನು. ಇವನು ತನ್ನ ಹೆಂಡತಿಯ ಚಟುವಟಿಕೆಯನ್ನೂ ಕಾರ್ಯದಕ್ಷತೆಯನ್ನೂ ಕಂಡು, ಯಾವ ಹೆಂಗಸು ಒಂದೆರಡು ದಿನಗಳಲ್ಲಿ ಈ ಮನೆಗೆ ಕೊನೆಯ ಶರಣು ಹೊಡೆದು ತೌರುಮನೆಗೆ ಹೋಗುತ್ತಿರುವಳೋ, ಅವಳಿಗೆ ಈ ಸಂಸಾರದ ವಿಷಯದಲ್ಲಿ ಇಷ್ಟೊಂದು ಮಮತೆಯಿದ್ದುದೆಂತು? ಎಂಬುದನ್ನು ಯೋಚಿಸಿ ಆಗಾಗ್ಗೆ ಗೊಂದಲದಲ್ಲಿ ಬೀಳುತ್ತಿದ್ದನು. ಈ ವಿಷಯವಾಗಿ ಭಾಮಿನಿಯನ್ನು ಮಾತಾಡಿಸಿ ತಿಳಿದುಕೊಳ್ಳಬೇಕೆಂದರೆ, ಯಾವುದೋ ಒಂದು ಅನಿರ್ದಿಷ್ಟ ಕಾರಣವು ಅಡ್ಡಿಯಾಗಿ ರಂಗರಾಯನನ್ನು ಮಾತಾಡಗೊಡುತ್ತಿರಲಿಲ್ಲ

ರಂಗರಾಯನು ಭಾಮಿನಿಯ ಸ್ವಭಾವವನ್ನು ಸಂಪೂರ್ಣವಾಗಿ ತಿಳಿದಿರಲಿಲ್ಲ; ಅರಿತ ಕೊಳ್ಳಲಿಕ್ಕೆ ತಕ್ಕ ಸಮಯವನ್ನೂ ಹೊಂದಿರಲಿಲ್ಲ. ದೊರೆದ ಅಲ್ಪಾವಧಿಯಲ್ಲಿ ವಿಚಾರಿಸಿ ತಿಳಿಕೊಂಡದ್ದರ ಫಲವಾಗಿ 'ಭಾಮಿನಿಯು ತನ್ನ ಮಾತ ಹೊರಳಿಸತಕ್ಕವಳಲ್ಲ' ಎಂಬುದನ್ನು ನಿರ್ಧರಿಸಿಕೊಂಡಿದ್ದನು. ಈ ನಿರ್ಧಾರಣೆಯನ್ನನುಸರಿಸಿ ರಂಗರಾಯನು ಆಗಾಗ್ಗೆ "ಭಾಮಿನಿಯು ತೌರು ಮನೆಗೆ ಹೋಗುವುದನ್ನು ತಪ್ಪಿಸತಕ್ಕವಳಲ್ಲ, ಆದರೆ ಅವಳ ಈಗಳಿನ ಕೃತಿಯು ಪಿತೃಗೃಹಗಮನದ ನಿರ್ಧಾರಣೆಗೆ ತೀರ ವಿಪರೀತವಿದೆ. ಹೀಗಾದದ್ದು ಹೇಗೆ?" ಎಂಬ ಗೂಢವಿಚಾರಕ್ಕೊಳಗಾಗುತ್ತಿದ್ದನು. ಸರಿಯಾದ ಉತ್ತರವನ್ನು ಕಾಣದೆ ಚಟಪಡಿಸುತ್ತಿದ್ದನು.

ರಂಗರಾಯನು ಹಲವು ಜನರ ಸ್ವಭಾವಗಳನ್ನು ಅವಲೋಕಿಸಿದ್ದನು; ಭಿನ್ನ ಸ್ವಭಾವದ ಅನೇಕ ಜನರೊಡನೆ ವ್ಯವಹರಿಸಿದ್ದನು. ಮಾನಸ ಶಾಸ್ತ್ರದ ದೊಡ್ಡ ದೊಡ್ಡ ಹೊತ್ತಿಗೆಗಳನ್ನು ಓದಿಕೊಂಡಿದ್ದನು. ಪ್ರಸಿದ್ಧ ಲೇಖಕರ ಕಾವ್ಯ-ಕಾದಂಬರಿ-ಕಥೆಗಳ ನಾಯಕ-ನಾಯಿಕೆಯರ ಸ್ವಭಾವವೈಶಿಷ್ಟ್ಯವನ್ನು ಕುರಿತು ಆಲೋಚಿಸುತ್ತಿದ್ದನು. ಇವನು ಈ ಎಲ್ಲವುಗಳ ಸಹಾಯತಕ್ಕೊಂಡರೂ, ಭಾಮಿನಿಯ ಸ್ವಭಾವವೈಶಿಷ್ಟ್ಯವನ್ನು ಕಂಡುಹಿಡಿಯಲಸಮರ್ಥನಾಗಿದ್ದನು.

ಭೀಮರಾಯನು ಬಂದು ಅಡುಗೆಯ ಮನೆಯ ಬಾಗಿಲ ಬಳಿಯಲ್ಲಿ ನಿಂತನು. ಒಳಗೆ ಹಣಕಿ ಹಾಕಿ ನೋಡಿ, "ತಂಗಿ, ಊಟಕ್ಕೆ ಕುಳ್ಳಿರಲಿಕ್ಕೆ ಇನ್ನು ಎಷ್ಟು ಅವಕಾಶವಿದೆ?" ಎಂದು ಕೇಳಿದನು.

ಭಾಮಿನಿಯು ನಗೆಮೊಗದಿಂದ "ಎಲ್ಲವೂ ಸಿದ್ಧವಿದೆ. ನನ್ನಿಂದ ತಡವಾಗುವಂತಿಲ್ಲ. ಯಾವಾಗ್ಗೆ ಊಟಕ್ಕೆ ಏಳುವರೆಂಬುದನ್ನು ನಿಮ್ಮ ಸ್ನೇಹಿತರನ್ನು

ವಿಚಾರಿಸಿಕೊಳ್ಳಿರಿ'' ಎಂದು ನುಡಿದಳು.

"ನೀನು ಕೆಲಸಕ್ಕೆ ಹಿಂಜರಿಯತಕ್ಕವಳಲ್ಲ, ಮಾತಿನಲ್ಲಿ ಸೋಲತಕ್ಕವಳಲ್ಲ ವೆಂಬದನ್ನು ನಾನು ಬಲ್ಲೆನು. ನಿನ್ನ ಸರ್ವೋತ್ಕೃಷ್ಟವಾದ ಅಡುಗೆಯ ರುಚಿ ಯನ್ನು ಒಮ್ಮೆಯಾದರೂ ನೋಡಬೇಕೆಂಬ ಆಶೆಯು ನನಗುಂಟಾಗಿದೆ; ಆದರೆ ಊಟಮಾಡಿಬಂದಿದ್ದ ನಾನು ಅಪಚನದ ಭಯದಿಂದ ಇಂದು ಆ ಆಶೆಯನ್ನು ತ್ಯಜಿಸಬೇಕಾಗಿದೆ. ಇನ್ನೊಂದು ದಿನ ನೀನು ಊಟಕ್ಕೆ ಆಮಂತ್ರಣ ಕೊಡ ದಿದ್ದರೂ, ನಾನೇ ನಾನಾಗಿ ಬಂದು ಊಟಮಾಡಿ ಹೋಗುವೆನು."

ಭಾಮಿನಿಯು "ಅವಶ್ಯವಾಗಿ ಬರ್ರಿ" ಎಂದು ನುಡಿದು, ಸುಮ್ಮನಾದಳು.

"ನಿನ್ನ ಆ ಮಗನು ಎಲ್ಲಿ? ಎಲ್ಲಿಯೂ ಕಾಣುವದಿಲ್ಲವಲ್ಲ." ಭೀಮರಾಯ ನೆಂದನು.

"ಇಂದು ಶಾಲೆಗೆ ಹೋಗುವುದಿಲ್ಲವೆಂದು ಹಟತೆಗೆದಿದ್ದನು. ಹಲವು ಬಗೆಯಾಗಿ ಹೇಳಿ, ಸಮಾಧಾನ ಪಡಿಸಿ, ಊಟಕ್ಕೆ ಹಾಕಿ ಇದೇ ಈಗ ಶಾಲೆಗೆ ಕಳುಹಿಕೊಟ್ಟಿರುವೆನು."

"ಅವನು ನಿನ್ನನ್ನು ಬಹಳವಾಗಿ ಪ್ರೀತಿಸುತ್ತಾನೆ.'' ಎಂದು ನುಡಿದು ಭೀಮರಾಯನು ತುಸ ನಕ್ಕು ಮತ್ತೆ ಮಾತಾಡಹತ್ತಿದನು: "ತಂಗಿ, ನೀನು ತೌರುಮನೆಗೆ ಹೊರಡುವುದರ ಸಮಾಚಾರವೇನು? ಸಿಟ್ಟಿನ ಭರದಲ್ಲಿ ನಿನ್ನಂಥ ವಳೂ ಸುಳ್ಳು ಮಾತಾಡಬಹುದೆಂಬುದನ್ನು ನಾನು ನಂಬಲಾರೆ! ಸಿಟ್ಟಿನ ಆವೇಶ ದಲ್ಲಿ ಬಾಯಿಗೆ ಬಂದಂತೆ ಬೊಗಳುವುದು ಸಾಮಾನ್ಯರ ಸ್ವಭಾವ; ಆದರೆ ನಿನ್ನಂತಹ ಸಟಲಚಿತ್ತಳೂ ಕ್ಷಣಮಾತ್ರವೇ ಏಕಾಗಲೊಲ್ಲದು, ಸಾಮಾನ್ಯರಂತೆ ಅವಿವೇಚನೆ ಯಿಂದ ಮಾತಾಡಬಹುದೆ?"

ಭಾಮಿನಿಯು ತನ್ನ ಮೇಲೆ ಹೊರಿಸಲ್ಪಡುತ್ತಿರುವ ಈ ಆರೋಪಣೆಗೆ ಉತ್ತರಕೊಡಬಯಿಸಲಿಲ್ಲ. ನತಮುಖಿಯಾಗಿ ನೀರವತೆಯಿಂದ ಕುಳಿತು ಬಿಟ್ಟಳು! ಭೀಮರಾಯನು ಮಾತ ಬೆಳಿಸದೆ, ಆ ಸ್ಥಳದಿಂದ ಹೊರಟು ರಂಗ ರಾಯನ ಲಾಯಬ್ರರಿ ಕೋಣೆಗೆ ಬಂದನು. ರಂಗರಾಯನು ಸ್ನಾನದ ತರು ವಾಯ ತನ್ನ ಕೋಣೆಗೆ ಬಂದು ಕನ್ನಡಿಯ ಮುಂದೆ ನಿಂತು ಕ್ರಾಪಿನ ಕೂದಲು ಗಳನ್ನು ಸರಿಪಡಿಸಿಕೊಳ್ಳುತ್ತಿದ್ದನು.

"ಕಾಲೇಜಕ್ಕೆ ಇಂದು ಸೂಟಿಯಿರುವದೆ?'' ಭೀಮರಾಯನು ಕೇಳಿದನು

"ಇಲ್ಲ; ಆದರೆ ಇಂದು ಎರಡು ತಾಸು ತಡೆದು ಹೋದರೂ ನಡೆಯು

ವಂತಿದೆ'' ರಂಗರಾಯನೆಂದನು.

"ಭಾಮಿನಿಯನ್ನು ತೌರುಮನೆಗೆ ಕಳುಹಿಕೊಡುವ ಏರ್ಪಾಟುಗಳೇನನ್ನೇನು ಮಾಡಿರುವೆ?''

"ಈಗ ಯಾವ ಏರ್ಪಾಟುಗಳನ್ನೂ ಮಾಡಬೇಕಾಗಿಲ್ಲ. ನಾಳೆ ಅವಳ ಅಣ್ಣನು ಬಂದು ಅವಳನ್ನು ಕರೆದೊಯ್ಯುವನಂತೆ ಅವಳು ಹೋದ ಮೇಲೆ ಪ್ರಪಂಚದ ವ್ಯವಸ್ಥೆಯ ಬಗ್ಗೆ ನಾನು ಏರ್ಪಾಟು ಮಾಡಬೇಕೆಂದಿರುವೆನು.''

"ಭಾವನಾವಶ ಮನುಷ್ಯನು ನೀನು! ಇಲ್ಲದ್ದೊಂದು ಕಲ್ಪಿಸಿಕೊಂಡು [illegible] ವನ್ನು ನಡಿಸಿರುವೆ! ಈ ಹೆಂಡತಿಯೊಡನೆ ನೀನು ಸರಿಯಾಗಿದ್ದು ಬಾಳುವೆ [illegible] ಲಾರದವನಾಗಿರುವೆ. ಈ ಪ್ರಸಂಗದಲ್ಲಿ ನಾವಿಬ್ಬರೂ ಹೆಂಡಂದಿರ [illegible] ಬದಲುಗಳನ್ನು ಮಾಡಿಕೊಳ್ಳೋಣ ನಿನಗೂ ಸುಖವಾದೀತು; [illegible] ದಿಂದಿರಬಹುದು.''

ರಂಗರಾಯನು ಅತಿಶಯ ಕುಪಿತನಾಗಿ "ನೀನು ನಿನ್ನ ಈ [illegible] ವಯಸ್ಸಿನಲ್ಲೂ ಬೀಭತ್ಸ ಮಾತಾಡಿ ಅನ್ಯರಿಗೆ ಚೇಷ್ಟೆ ಮಾಡುವದನ್ನು [illegible] ರೆಯಾ?'' ಎಂದು ಕೇಳಿದನು.

"ಏನು ಮಾಡಲಿ? ಬಿಡಬೇಕೆಂದಿರುವೆನ; ಆದರೆ ನಿಮ್ಮ ವ್ಯವಹಾರ ವನ್ನು ನೋಡಿ ಬಿಡಲಾರದವನಾಗಿರುವೆನು. ಭಾಮಿನಿಯು ತನ್ನ [illegible] ಭರದಲ್ಲಿ ನಾನು ತೌರುಮನೆಗೆ ಹೋಗುವೆನೆಂದುಚ್ಚರಿಸುತ್ತಲೆ ನೀನು [illegible] ವಿಲ್ಲದೆ ಹೋಗು, ನನಗೆ ಬೇರೊಬ್ಬ ಹೆಂಡತಿಯು ದೊರೆಯುವಳು, ಎಂದು ಹೇಳಿ ಬಿಟ್ಟೆ! ಇದೇನು ಸರಿಯಾದ ಮಾತೆ? ನೀವು ಅಣ್ಣ-ತಂಗಿಯರಿಬ್ಬರೂ ಒಂದೇ ಪಡಿಯಚ್ಚಿನಲ್ಲಿ ತಯಾರಾದವರು—ಒಂದೇ ವಿಧದ ಸ್ವಭಾವದವರು. [illegible] ತಹ ಸ್ವಭಾವದವರೊಡನೆ ಹೆರವರು ಬಾಳುವೆ ಮಾಡಿಕೊಂಡಿರುವುದು ದುಸ್ಸಾಧ್ಯ! ಇರಲಿ. ನಾನು ಭಾಮಿನಿಗೆ ಹೇಳಿಟ್ಟಿರುವೆನು. ಅವಳು ಇನ್ನು ತೌರುಮನೆಗೆ ಹೋಗಲಿಚ್ಛಿಸುವದಿಲ್ಲ; ಆದರೆ ನೀನು ಅವಳ ಮನಸ್ಸಿಗೆ ನಡುವಂತೆ [illegible] ಡುತ್ತ ಹೋಗದಿರು. ಅವಳಿಗೆ ಅಪ್ರೀಯವಾಗುವಂತೆ ಆಚರಿಸದಿರು.'' [illegible] ರಾಯನು ಜೇಬಿನಲ್ಲಿಯ ಗಡಿಯಾರವನ್ನು ತೆಗೆದು ನೋಡಿ "ವೇಳೆಯು [illegible] ವಾಯಿತು. ಇನ್ನು ನಾನು ಹೋಗುವೆನು. ಮತ್ತೆ ನಾಳೆ ಮುಂಜಾನೆ [illegible] ವೆನು.'' ಎಂದು ಹೇಳಿ ಕೊಂಚ ಮುಂದೆ ಹೋದನು. ಮತ್ತೆ ಹಿಂದಿರುಗಿ "ರಂಗ, ಕೆಲವು ದಿನಗಳ ಮಟ್ಟಿಗಾದರೂ ನೀನು ಸಾವಧಾನತೆಯನ್ನವಲಂಬಿಸು.

ಅವಳ ಮತವಂತೆ ವರ್ತಿಸು. ಅವಳು ಆಚಾರ್ಯರ ಮಗಳು. ಅನಾಚಾರವನ್ನೆಷ್ಟು ಮಾತ್ರಕ್ಕೂ ಸಹಿಸಳು. ನೀನು ಅನಾಚಾರವಾಗದಂತೆ ಎಚ್ಚರದಿಂದಿರು. ಖಾದ್ಯ-ಪೇಯಗಳ ವಿಷಯದಲ್ಲಿ ಸಂಯಮನವನ್ನವಲಂಬಿಸು. ಇದರಿಂದ ನಿನಗೆ ಲಾಭವಲ್ಲದೆ ಹಾನಿಯಿಲ್ಲ. ಊಟ-ಉಡಿಗೆಗಳ ವಿಷಯದಲ್ಲಿಯು ಆಡಂಬರವು ಪ್ರಕೃತಿಗೂ ಹಿತವಲ್ಲ ಆರ್ಥಿಕ ದೃಷ್ಟಿಯಿಂದಲೂ ಹಾನಿಕರವು," ಎಂದು ನುಡಿದು ಉತ್ತರದ ಹಾದಿಯನ್ನು ನೋಡದೆ, ಭರದಿಂದ ಹೊರಟು ಹೋದನು.

ರಂಗರಾಯನು ಕೆಲಹೊತ್ತು ಆಲೋಚನಾಪರನಾಗಿ ನಿಂತುಬಿಟ್ಟನು. ಭೀಮರಾಯನು ಯಾವಾಗ್ಗೆ ಬಂದಿದ್ದನು? ಭಾಮಿನಿಗೆ ಏನೆಂದು ಹೇಳಿದನು? ಭಾಮಿನಿಯು ಯಾವ ಮಾತಾಡಿದಳು? ಭಾಮಿನಿಯ ಸ್ಥಿರಸಂಕಲ್ಪವು ಹೀಗೆ ಒಮ್ಮೆಲೆ ಹೊಡಮುಳ್ಳಿದ್ದು ಹೇಗೆ? ಇವೇ ಮೊದಲಾದ ಪ್ರಶ್ನೆಗಳನ್ನೆತ್ತಿ ಅವನು ಬಹಳವಾಗಿ ಯೋಚಿಸಿದನು; ಆದರೆ ಸಂಪೂರ್ಣ ಸಮಾಧಾನ ಹೊಂದಬಹುದಾದ ಉತ್ತರವು ದೊರೆಯಲಿಲ್ಲ.

ಪರಿಚಾರಿಕೆಯು ಬಂದು 'ಊಟಕ್ಕೆ ಏಳಿರಿ' ಎಂದು ಕರೆದು ಹೋದಳು. ರಂಗರಾಯನು ಒಳಗೆ ಹೋದನು. ತಾಟು ಬಡಿಸಿ ಸಿದ್ಧವಾಗಿತ್ತು. ಕೊಂಚ ದೂರದಲ್ಲಿ ಭಾಮಿನಿಯು ಕುಳಿತಿದ್ದಳು. ರಂಗರಾಯನು ಸುಮ್ಮನೆ ಹೋಗಿ ಮಣೆಯ ಮೇಲೆ ಕುಳಿತನು. ಊಟಮಾಡಹತ್ತಿದನು. ಭೀಮರಾಯನ ಮಾತೆತ್ತಿ ಭಾಮಿನಿಯೊಡನೆ ಮಾತಾಡಬೇಕೆಂದು ಅವನ ಮನಸ್ಸು ಹಾತೊರೆಯುತ್ತಿತ್ತು. ಭೀಮರಾಯನು ಹೇಳಿದಂತೆ ನಾಲ್ಕು ಸರಸಮಾತುಗಳನ್ನಾಡಿ ಹೆಂಡತಿಯ ಮನೋರಂಜನೆ ಮಾಡಲಿಕ್ಕೆ ಅವನ ಮನಸ್ಸು ಉತ್ಸುಕವಾಗಿತ್ತು; ಆದರೆ ನಾಲಿಗೆಯು ರಂಗರಾಯನ ಇಚ್ಛೆಗೆ ಸಹಾಯ ಮಾಡಲಿಲ್ಲ. ರಂಗರಾಯನು ಎಷ್ಟೇ ಪ್ರಯತ್ನಿಸಿದರೂ ಬಾಯಿಂದ ಮಾತುಗಳನ್ನು ಹೊರಡಿಸಲಸಮರ್ಥನಾದನು; ಮೋರೆಯನ್ನು ಮೇಲಕ್ಕೆತ್ತಿ ಭಾಮಿನಿಯ ಮುಖಭಾವವನ್ನು ನೋಡಿಕೊಳ್ಳಲಾರದವನಾದವನಾದನು. ರಂಗರಾಯನು ತನ್ನ ಸ್ಥಿತಿಯು ಹೀಗೇಕೆ ಆಗಿರಬಹುದೆಂಬುದನ್ನು ಭಾವಿಸಿ ತಿಳಿಯದಾದನು. ಕೊನೆಯಲ್ಲಿ ರಾಮುನ ಮಾತೆತ್ತಿಯಾದರೂ ಹೆಂಡತಿಯೊಡನೆ ಮಾತಾಡಬೇಕೆಂದಾಶಿಸಿದನು, ಆದರೆ ಇದೂ ಸಾಧ್ಯವಾಗಲಿಲ್ಲ. ರಂಗರಾಯನು ಬೇಗ ಬೇಗ ಊಟಮಾಡಿ ಯಾವ ಮಾತನ್ನೂ ಆಡದೆ ಹೊರಹೊರಟನು.

---

# ೧೪

ಮರುದಿನ ಮುಂಜಾವಿನಲ್ಲಿ ಭಾಮಿನಿಯ ತಮ್ಮನಾದ ವೆಂಕಟರಮಣನು ಬಂದನು. ಇವನ ವಯಸ್ಸು ಹದಿನಾಲ್ಕು-ಹದಿನೈದು ವರ್ಷಗಳದಿರಬಹುದು. ರಂಗರಾಯನು ಕೈಕಾಲು-ಮೋರೆಗಳನ್ನು ತೊಳೆಕೊಳ್ಳಲೆಂದು ಬಚ್ಚಲಮನೆಗೆ ಹೊರಟ ಸಮಯದಲ್ಲಿ ಈ ಅಪರಿಚಿತ ಕಿಶೋರನನ್ನು ಕಂಡನು. ಯಾವುದೊ ಒಂದು ಆಶಂಕೆಯಿಂದ ಅವನ ಎದೆಯು ಢವಢವ ಹಾರಹತ್ತಿತು. ಅವನು ನೀನಾರೆಂದು ಕಿಶೋರನನ್ನು ಕೇಳಿದನು. ವೆಂಕಟರಮಣನು ತಾನಾರೆಂಬುದನ್ನು ಹೇಳಿ, "ಅಣ್ಣನಿಗೆ ಬರಲಿಕ್ಕೆ ಅನುಕೂಲವಿರಲಿಲ್ಲ. ಕಾರಣ ಅವನು ಅಕ್ಕನನ್ನು ಕರೆತರುವುದಕ್ಕೆ ನನ್ನನ್ನು ಕಳುಹಿಕೊಟ್ಟನು" ಎಂದು ನುಡಿದನು.

ರಂಗರಾಯನು "ಆಗಲಿ, ಕರೆದುಕೊಂಡು ಹೋಗು" ಎಂದು ನುಡಿದು ಮುಂದೆ ನಡೆದನು. ಕೈಕಾಲು ತೊಳೆದುಕೊಂಡು ತನ್ನ ಓದುವ ಕೋಣೆಯಲ್ಲಿ ಹೋಗಿ ಕುಳಿತುಕೊಂಡನು. ಅಲ್ಲಿ ಮುಂಜಾವಿನ ಉಪಾಹಾರದ ಸಾಹಿತ್ಯಗಳೆಲ್ಲ ಸಿದ್ಧವಾಗಿದ್ದುವು. ಆದರೆ ರಂಗರಾಯನು ಯಾವ ಪದಾರ್ಥವನ್ನೂ ತಿನ್ನಲಿಲ್ಲ. ಒಂದು ಕಪ್ಪು ಚಹವನ್ನು ಮಾತ್ರ ಕುಡಿದು ಆರಾಮ ಕುರ್ಚಿಯ ಮೇಲೆ ಬಿದ್ದುಕೊಂಡನು. ಭಾಮಿನಿಯ ತೌರುಮನೆಯಿಂದ ಭಾಮಿನಿಯನ್ನು ಕರೆಯಲಿಕ್ಕೆ ಯಾರಾದರೂ ಬರುವರೆಂಬುದು ರಂಗರಾಯನಿಗೆ ಮೊದಲೆ ಗೊತ್ತಿತ್ತು. ಹೀಗಿರಲು ರಂಗರಾಯನು ವೆಂಕಟರಮಣನನ್ನು ನೋಡಿ, ವಿಚಲಿತನಾಗುವ ಕಾರಣವಿರಲಿಲ್ಲ. ಮೇಲಾಗಿ ವೆಂಕಟರಮಣನು ಕರೆಯಬಂದಿರುವನೆಂದ ಬಳಿಕ ಭಾಮಿನಿಯು ತೌರುಮನೆಗೆ ಹೋಗಲೇಬೇಕೆಂಬ ನಿರ್ಬಂಧವೂ ಇರಲಿಲ್ಲ. ಭಾಮಿನಿಯು ತನ್ನ ಇಷ್ಟದಂತೆ ತೌರುಮನೆಗೆ ಹೋಗಬಹುದಿತ್ತು—ಇಲ್ಲವೆ ಕೊನೆಯವರೆಗೂ ತೌರುಮನೆಯನ್ನು ಸೇರಬಯಸದೆ, ಪತಿಗೃಹದಲ್ಲಿ ಚಿರಸ್ಥಾಯಿ ಕಳೆಯಬಹುದಿತ್ತು; ಆದರೆ ಈ ವಿಷಯವಾಗಿ ನಿಶ್ಚಯಾತ್ಮಕವಾದ ಯಾವುದೊಂದು ಮಾತು ಗೊತ್ತಾಗದ ಹೊರತು ರಂಗರಾಯನಿಗೆ ಸಮಾಧಾನವಾಗುವಂತಿರಲಿಲ್ಲ. ರಂಗರಾಯನು ಯೋಚಿಸಹತ್ತಿದನು: "ಭೀಮನು ಇಂದು ಮುಂಜಾವಿನಲ್ಲಿಯೇ ಬರುವೆನೆಂದು ಹೇಳಿದ್ದನು. ಇನ್ನೂವರೆಗೆ ಯಾಕೆ ಬಂದಿರಲಿಕ್ಕಿಲ್ಲ? ಅವನು ಈ ಅವಧಿಯಲ್ಲಿಯೇ ನಿನ್ನೆ ಹೇಳಿ ಹೋಗಿದ್ದ ಮಾತನ್ನು ಮರೆದಿರಬಹುದೆ? ಇಲ್ಲವೆ, ಕೆಲಸಗಳ ಗಡಿಬಿಡಿಯಲ್ಲಿ ಇಲ್ಲಿಗೆ ಬರಲಿಕ್ಕೆ ಸಮಯವು ಸಿಕ್ಕಿರಲಿಕ್ಕಿಲ್ಲವೆ?' ಅವನು ಬಂದಿದ್ದರೆ, ಯಾವುದೊಂದನ್ನೂ ನಿಶ್ಕರ್ಷಿಸಲಿಕ್ಕೆ ಒಳ್ಳೇ

...ಕಲವಾಗುತ್ತಿತ್ತು. ಯಾವುದೊಂದನ್ನು ಗೊತ್ತುಮಾಡಿಕೊಳ್ಳದೆ ಕೇವಲ ...ಸಮುದ್ರದಲ್ಲಿ ಬಿದ್ದುಕೊಂಡಿರುವುದು ಬಹು ತಾಪದಾಯಕವು! ...ರಾಯನು ನಿನ್ನೆ ಇನ್ನು ಭಾಮಿನಿಯು ತೌರುಮನೆಗೆ ಹೋಗುವದಿಲ್ಲೆಂದು ಹೇಳಿಹೋದನು. ಇಂದು ಭಾಮಿನಿಯ ತಮ್ಮನು ಕರೆಯಬಂದಿರುವನು? ಭಾಮಿನಿಯ ವಿಚಾರಪರವಶತೆಯು ವೆಂಕಟರಮಣನಿಗೆ ತಿಳಿದಿರಲಿಕ್ಕಿಲ್ಲವೆ. ...ಭೀಮರಾಯನು ನನ್ನ ಮುಂದೆ ಸುಳ್ಳು ಹೇಳಿರಬಹುದೆ? ಭಾಮಿನಿಯನ್ನು ...ಸಿದರೆ, ಈ ಮಾತಿನ ನಿಶ್ಚಯವಾಗಿ ಹೋಗುವುದು! ಆದರೆ ನಾನಾಗಿಯೆ ಹೋಗಿ ಅವಳನ್ನು ಕೆಣಕಿ ಮಾತಾಡಿಸುವುದು ಬೇಡ!" ರಂಗರಾಯನು ಗಡಿ...ದ ಕಡೆಗೆ ನೋಡಿದನು. ಒಂಬತ್ತು ಹೊಡೆದು ಹೋಗಿತ್ತು. ಭೀಮ...ನು ಇನ್ನೂ ಯಾಕೆ ಬಂದಿರಲಿಕ್ಕಿಲ್ಲೆಂದು ಬಾಗಿಲದ ಕಡೆಗೆ ನೋಡಿದನು. ...ಬರುತ್ತಿರುವ ಸಪ್ಪಳವು ಕೇಳಿಸಿತು ರಂಗರಾಯನು ಭೀಮರಾಯನೇ ...ಬಹುದೆಂದು ಭಾವಿಸಿದನು, ಆದರೆ ಆಗಂತುಕನು ಭೀಮರಾಯ ...ರಲ್ಲ — ವೆಂಕಟರಮಣನಾಗಿದ್ದನು. ರಂಗರಾಯನು ಒಮ್ಮೆ ಮೋರೆ ...ಎತ್ತಿ ವೆಂಕಟರಮಣನನ್ನು ದೃಷ್ಟಿಸಿದನು ಒಳಿಕ ಒಂದು ದೊಡ್ಡ ಹೊ...ಯನ್ನು ತಕ್ಕೊಂಡು ಓದುತ್ತ ಕುಳಿತು ತಾನು ವಾಚನದಲ್ಲಿ ನಿಮಗ್ನ ನಾ...ರುವಂತೆ ನಟಿಸಹತ್ತಿದನು.

ವೆಂಕಟರಮಣನು ಒಂದು ಕುರ್ಚಿಯ ಮೇಲೆ ಕುಳ್ಳಿರಬೇಕೆಂದು ಹೋ...ನು, ಆದರೆ ಅಲ್ಲಿ ಉಪಾಹಾರದ ಸಾಮಾನುಗಳು ಹರಡಿರುವುದನ್ನು ಕಂ... ದೂರ ಸರಿದು ಕ್ಷಣಕಾಲ ಸುಮ್ಮನೆ ನಿಂತುಕೊಂಡನು ಒಳಿಕ ಒಂದು ಕು...ಯನ್ನೆತ್ತಿಕೊಂಡು ಅದನ್ನು ಬೇರೊಂದು ಸ್ಥಳದಲ್ಲಿರಿಸಿಕೊಂಡು ಕುಳಿತನು. ಇವನು ರಂಗರಾಯನು ತನ್ನೊಡನೆ ಆನಂದದಿಂದ ಮಾತಾಡನೆಂಬದನ್ನು ತಿಳಿ...ವನಾಗಿದ್ದನು; ಆದರೆ ಬಂದ ಕಾರಣವನ್ನು ವಿಚಾರಿಸದಷ್ಟು ಕಠೋರನಾಗಿರ ...ಹುದೆಂಬದನ್ನು ಭಾವಿಸಿರಲಿಲ್ಲ. ರಂಗರಾಯನು ಮಾತಾಡದಿರುವುದನ್ನು ಕಂಡು ವೆಂಕಟರಮಣನು ತಾನೇ ಮಾತಾಡಲುಪಕ್ರಮಿಸಿದನು: "ಅಕ್ಕನು ...ರ ...ವರೆ ಗಂಟೆಯ ಗಾಡಿಯಿಂದ ಹೊರಡಬೇಕೆಂದಿರುವಳು."

"ಹೊರಡಬೇಕೆಂದಿರುವಳೆ? ಹೊರಡಲಿ. ನಾನು ಬೇಡೆನ್ನುವದಿಲ್ಲ. ಅ...ಳ ಹೊರಡುವಿಕೆಗೆ ನನ್ನಿಂದ ಪ್ರತಿಬಂಧವಾದೀತೆಂದು ಅವಳು ಬೆದರಿರುವ ಳೇ...?" ರಂಗರಾಯನು ಕೇಳಿದನು.

ವೆಂಕಟರಮಣನಿನ್ನೂ ಹುಡುಗನು. ರಂಗರಾಯನ ಪ್ರಶ್ನೆಗೆ ಯಾವ ಉತ್ತರವನ್ನು ಕೊಡಬೇಕೆಂಬುದು ಅವನಿಗೆ ಗೊತ್ತಾಗಲಿಲ್ಲ. ಅವನು ಕ್ಷಣ ಕಾಲ ಸುಮ್ಮನಿದ್ದು ಬಳಿಕ 'ಹಾಗೇನೂ ಇಲ್ಲ' ಎಂದು ಉಚ್ಚರಿಸಿ ಮತ್ತೆ ಸುಮ್ಮನಾದನು.

ಸಮೀಪದ ಕಿಡಕಿಯ ಬಳಿಯಲ್ಲಿ ಬಳೆಗಳ ಮೃದುಸ್ವರವಾಗುತ್ತಿತ್ತು. ರಂಗರಾಯನಿಗೆ ಕೇಳಿಸಿತು. ರಂಗರಾಯನು ಭಾಮಿನಿಯೇ ಬಂದು ನಿಂತಿರ ಬೇಕೆಂದು ಭಾವಿಸಿದನು. ಇವನ ಕೋಪದ ಉತ್ತಾಪವು ಮತ್ತಷ್ಟು ಮೇಲೇ ರಿತು. ಮಾತಾಡಹತ್ತಿದನು :"ಅವಳು ಹೋಗುವುದಕ್ಕೆ ನಾನೆಂದಾಗಲೂ ಬೇಡೆಂದು ಅಂದವನಲ್ಲ. ಅವಳು ತನಗೆ ಇಷ್ಟವಿದ್ದಾಗ ಹೊರಟು ಹೋಗಲಿ."

ವೆಂಕಟರಮಣನು ಮಾತಾಡದೆ ಸುಮ್ಮನಿದ್ದನು. ರಂಗರಾಯನು "ನಿಮ್ಮ ಅಣ್ಣನು ಬರುವನೆಂಬ ಸುದ್ದಿಯನ್ನು ಕೇಳಿದ್ದೆನು. ಅವನೇಕೆ ಬರ ಲಿಲ್ಲ?" ಎಂದು ಕೇಳಿದನು.

ವೆಂಕಟರಮಣನು ಸಂಕೋಚದಿಂದ ಮೆಲ್ಲ ಮೆಲ್ಲನೆ ಉಚ್ಚರಿಸಹತ್ತಿದನು: "ಅವನು ನನ್ನನ್ನು ಕಳುಹಿಕೊಡಲಿಕ್ಕೂ ಮನಸ್ಸಿಲ್ಲದವನಾಗಿದ್ದನು."

"ಅದೇಕೆ?" ರಂಗರಾಯನು ಕೇಳಿದನು. ವೆಂಕಟರಮಣನು ಮಾತಾಡ ಲಿಲ್ಲ. ರಂಗರಾಯನು ಮತ್ತೆ ಮಾತಾಡಹತ್ತಿದನು: "ನೀನು ಸಣ್ಣ ಹುಡುಗ. ನಿನ್ನ ಮುಂದೆ ಎಲ್ಲ ಮಾತುಗಳನ್ನೂ ಮಾತಾಡಲಿಕ್ಕೆ ಬರುವಂತಿಲ್ಲ—ಮಾತಾ ಡುವುದರಿಂದ ಪ್ರಯೋಜನವೂ ಇಲ್ಲ! ಇಲ್ಲಿಂದ ನೀನು ತಿರುಗಿ ಹೋದ ಬಳಿಕ ನಿಮ್ಮ ಅಣ್ಣನು ನಿನ್ನನ್ನು ವಿಚಾರಿಸಬಹುದು. ಒಂದುವೇಳೆ ಅವನು ಹೀಗೆ ವಿಚಾರಿಸಿದರೆ, ಹೇಳುವುದಕ್ಕಾಗಿ ನಾನು ಒಂದೆರಡು ಮಾತುಗಳನ್ನು ನಿನ್ನ ಮುಂದೆ ನುಡಿಯುವೆನು. ಈ ವಿಷಯದಲ್ಲಿ ಭಾಮಿನಿಯು ದೋಷರಹಿತಳು. ಅಪರಾಧವೆಲ್ಲವೂ ನನ್ನದು! ನಾನು ಭಾಮಿನಿಯನ್ನು ಮತ್ತೆ ಕರೆಸಿಕೊಂಡದ್ದು ಸಂಪೂರ್ಣ ಅನುಚಿತವು!"

ರಂಗರಾಯನು ಕ್ಷಣಕಾಲ ಸುಮ್ಮನಿದ್ದು ಬಳಿಕ ಮತ್ತೆ ಹೇಳಹತ್ತಿದನು: "ಅಪ್ಪನು ದೊಡ್ಡ ತಪ್ಪು ಮಾಡಿ ಹೋಗಿದ್ದನು. ಬಹು ದಿನಗಳ ತರುವಾಯ ಆ ತಪ್ಪನ್ನು ಸುಧಾರಿಸಿಕೊಳ್ಳುವ ಅನುಕೂಲತೆಯು ನನಗೆ ತಾನೇ ತಾನಾಗಿ ದೊರೆಯಿತು. ಆಗ ನಾನು ಮುನ್ನಿನ ದೋಷವನ್ನು ಸುಧಾರಿಸಿಕೊಳ್ಳುವ ಸಂಕಲ್ಪ ಮಾಡಿಕೊಂಡೆನು. ಭಾಮಿನಿಯನ್ನು ಕರೆಕಳುಹಿದನು. ಭಾಮಿನಿಯೂ

ಬಂದಳು; ಆದರೆ ಇದರಿಂದ ನನಗಾಗಲಿ, ಅವಳಿಗಾಗಲಿ ಹಿತವಾಗಲಿಲ್ಲ. ಒಂದು ದೋಷವನ್ನು ಮುಚ್ಚುವುದರಲ್ಲಿದ್ದ ನನ್ನೆದುರಿಗೆ ನೂರಾರು ದೋಷ ಗಳು ತಾವೇ ತಾವಾಗಿ ಆಗಮಿಸಿ ಥೈ ಥೈ ಕುಣಿದಾಡ ಹತ್ತಿದುವು.'

ವೆಂಕಟರಮಣನು ಇದಕ್ಕೆ ಏನೆಂದು ಉತ್ತರ ಕೊಡಬೇಕು? ಇವನು 'ಮೌನಂ ಸರ್ವತ್ರ ಸಾಧನಂ' ಎಂಬ ಮಂತ್ರವನ್ನು ಜಪಿಸುತ್ತ ಕುಳಿತಿದ್ದನು. ಈ ಸಮಯದಲ್ಲಿ ಭೀಮರಾಯನು ಬಂದು ಒಳಹೊಕ್ಕನು. ರಂಗರಾಯನು ಭೀಮರಾಯನನ್ನು ನೋಡಿದನು, ಆದರೆ ತನ್ನ ವಾಕ್ಪ್ರಹಾರವನ್ನು ತಡೆಯಲಿಲ್ಲ. ನಾಲಿಗೆಗೆ ಒಮ್ಮೆ ಕಠೋರ ವಾಕ್ಯಗಳನ್ನುಚ್ಚರಿಸಲಿಕ್ಕೆ ಸ್ವಾತಂತ್ರ್ಯವಿತ್ತರೆ ಸಾಕು. ಮುಂದಿನ ಮಾತುಗಳು ತಾವೇ ತಾವಾಗಿ ಕಠೋರತರ, ಕಠೋರ ತಮವಾಗುತ್ತ ನಡೆಯುವವು ಭಾಮಿನಿಯು ಹೊರಗೆ ನಿಂತಿದ್ದಳು. ಇವಳ ಮನಸ್ಸನ್ನು ನೋಯಿಸುವ ಉತ್ತೇಜನಕ್ಕೊಳಗಾಗಿ ಮೈಮರೆದಿದ್ದ ರಂಗ ರಾಯನು ಮತ್ತೆ ಮಾತಾಡಹತ್ತಿದನು: "ನಾನು ಒಂದು ದಿನ ನಿನ್ನ ಸಹೋದರಿ ಯನ್ನು ಲಗ್ನಮಾಡಿಕೊಂಡಿದ್ದುದು ನಿಜ, ಆದರೆ ಅವಳು ನನ್ನ ಸಹಧರ್ಮಿಣಿ ಯೆಂದೂ ಆಗಳು! ನಮ್ಮಿಬ್ಬರ ಶಿಕ್ಷಣ-ದೀಕ್ಷೆ-ಸಮಾಜ-ಧರ್ಮ ಮೊದಲಾದವು ಒಂದೇ ವಿಧದವಲ್ಲವಿಷ್ಟೆ ಅಲ್ಲ, ಪರಸ್ಪರ ಹೊಂದಿಕೆಯಿಲ್ಲದವು. ನಾನು ನನ್ನ ಮನಸ್ಸಿನ ವಿರುದ್ಧವಾಗಿಯೂ ಅವಳನ್ನು ಮನೆಯಲ್ಲಿಟ್ಟುಕೊಂಡು ನನ್ನ ಮನೆ ಯನ್ನು ಆಚಾರ್ಯರ ಮನೆಯ ಲ್ಲಿ ರೂಪಾಂತರಗೊಳಿಸಿಕೊಳ್ಳಬಹುದಾಗಿತ್ತು; ಆದರೆ ನಾನು ಇದಕ್ಕೆ ಸಮ್ಮತಿಸುವುದರಿಂದ ನನ್ನ ಏಕಮಾತ್ರ ಸಹೋದರಿಯು ದುಃಖದಿಂದಲೂ ಕ್ರೋಧದಿಂದಲೂ ನನ್ನನ್ನು ತ್ಯಜಿಸಿ, ನನಗೆ ಪರಕೀಯಳಾಗಿ ಹೋಗುವಳು; ಇದೊಬ್ಬ ಮಗನು ಕೆಟ್ಟ ಶಿಕ್ಷಣದಲ್ಲಿ ಬೆಳೆದು, ಕೆಟ್ಟದ್ದನ್ನು ಅನು ಕರಿಸಿ ಕೆಲಸಕ್ಕೆ ಬಾರದವನಾಗಿ ಹೋಗುವನು; ನಾವಿದನ್ನು ಎಷ್ಟು ಮಾತ್ರಕ್ಕೂ ಸಹಿಸಲಾರದವನಾಗಿರುವೆನು! ನಾನು ಇಂತಹ ಸಂಕಟದಲ್ಲಿ ಸಿಕ್ಕಿದ್ದರೂ, ಭಾಮಿ ನಿಗೆ ನನ್ನ ಮನೆಬಿಟ್ಟುಹೋಗೆಂದು ಹೇಳಲಾರದವನಾಗಿದ್ದೆನು; ಆದರೆ ಅವಳು ತಾನೇ ತಾನಾಗಿ ಮತ್ತೆ ತೌರುಮನೆಗೆ ಹೋಗುವೆನೆಂದು ನುಡಿದು, ನನ್ನ ಮೇಲಿನ ದೊಡ್ಡ ಭಾರವನ್ನು ಕಡಿಮೆ ಮಾಡಿರುವಳು ಇದಕ್ಕಾಗಿ ನಾನು ಅವಳಿಗೆ ನನ್ನ ಕೃತಜ್ಞತೆಯನ್ನು ಎಷ್ಟು ಬಗೆಯಿಂದ ಪ್ರಕಟಿಸಿದರೂ ಸಾಲದಾಗಿದೆ!"

ಭೀಮರಾಯನು ವಿಸ್ಮಯದಿಂದ ಮಾತಾಡಲಾರದವನಾಗಿ ರಂಗರಾಯನ ಮುಖದ ಕಡೆಗೆ ನೋಡುತಲಿದ್ದನು. ಲಜ್ಜಾಶೀಲನೂ, ದುರ್ಬಲ ಪ್ರಕೃತಿ

ಯುವನೂ ಆದ ರಂಗರಾಯನು ಹೆರವರ ಹೃದಯಕ್ಕೆ ತಾಗುವ ಭಯಂಕರ ಮಾತುಗಳನ್ನೆಂದೂ ಉಚ್ಚರಿಸಿದವನಲ್ಲ. ಇಂತಹ ರಂಗರಾಯನು ಇಂದು ಇದೇನು ನುಡಿಯುತ್ತಿರುವನು? ಭಾಮಿನಿಯ ಕಿರಿತಮ್ಮನು ಭಾಮಿನಿಯನ್ನು ಕರೆಯ ಬಂದುದು ಭೀಮರಾಯನಿಗೆ ಮೊದಲೆ ತಿಳಿದಿತ್ತು; ಮತ್ತು ಭೀಮರಾಯನು ಆ ಕೋಣೆಯಲ್ಲಿ ಕುಳಿತಿದ್ದ ಅಪರಿಚಿತ ಬಾಲಕನನ್ನು ನೋಡಿ, ಇವನೆ ಭಾಮಿನಿಯ ತಮ್ಮನಾಗಿರಬೇಕೆಂದು ಊಹಿಸಿದ್ದನು. ರಂಗರಾಯನು ಬಾಲಕನ ಸಮ್ಮುಖ ದಲ್ಲಿ ಹೀಗೇಕೆ ಮಾತಾಡುತ್ತಿರಬಹುದು?

ಭೀಮರಾಯನು ವೆಂಕಟರಮಣನ ಹತ್ತಿರ ಹೋಗಿ, "ತಮ್ಮಾ, ಈ ಮಾತುಗಳಲ್ಲಿಯ ಒಂದು ಅಕ್ಷರವು ಸಹ ನಿನ್ನ ಅಕ್ಕನಿಗೆ ತಿಳಿಯದಂತೆ ಮಾಡು," ಎಂದು ಮೆಲ್ಲನೆ ಮಾತಾಡಿದನು.

ವೆಂಕಟರಮಣನು ಕಿಡಕಿಯ ಕಡೆಗೆ ಕೈಮಾಡಿ ತೋರಿ "ಅದೋ, ಅಲ್ಲಿ ಅಕ್ಕನಿರುವಳು. ಎಲ್ಲವನ್ನೂ ಕೇಳಿಕೊಂಡಿರುವಳು. ನಾನು ಹೇಳುವ ಪ್ರಯೋಜನವಿಲ್ಲ." ಎಂದು ನುಡಿದನು.

"ಹೊರಗೆ ನಿಂತಿರುವಳೇ? ಎಲ್ಲಿ?" ಭೀಮರಾಯನು ಕೇಳಿದನು.

ವೆಂಕಟರಮಣನಿಗೆ ಮಾತಾಡಲವಕಾಶಕೊಡದೆ, ರಂಗರಾಯನು ಮಾತಾಡ ಹತ್ತಿದನು: "ಅಹುದು. ನಾನು ಬಲ್ಲೆನು. ಅವಳು ಅಲ್ಲಿ ನಿಂತು ನಾನಾಡಿದ ಮಾತುಗಳನ್ನು ಕೇಳಿಕೊಂಡಿರುವಳು."

ಭೀಮರಾಯನ ಮೋರೆಯು ಕಪ್ಪಿಟ್ಟಿತು. ಸ್ತಬ್ಧನಾಗಿ ನಿಂತುಬಿಟ್ಟನು.

ವೆಂಕಟರಮಣನು ಅಂದಿನ ಅಪರಾಹ್ಣ ಸಮಯದಲ್ಲಿ ಭಾಮಿನಿಯನ್ನು ಕರೆದುಕೊಂಡು ಸ್ಟೇಶನಕ್ಕೆ ಹೊರಟನು. ಈ ಸಮಯದಲ್ಲಿ ರಾಮನು ತನ್ನ ಅತ್ತೆಯ ಮನೆಯಲ್ಲಿದ್ದನು. ರಂಗರಾಯನು ಕಾಲೇಜದ ಕೋಣೆಯಲ್ಲಿದ್ದನು. ಭೀಮರಾಯನು ಕೋರ್ಟಿನ ಬಾರಲಾಯಬ್ರರಿಯಲ್ಲಿ ಕುಳಿತಿದ್ದನು.

ಮರುದಿನ ಮುಂಜಾವಿನ ಚಹಾಪಾನ ಸಮಾರಂಭದ ಸಮಯದಲ್ಲಿ ಸುಭದ್ರೆಯು ಪತಿಯ ಮೇಲೆ ಕಡೆಗಣ್ಣಿನ ನೋಟವನ್ನು ಬೀರಿ:—"ಅಣ್ಣನು ಏನು ಮಾಡಿದನೆಂಬದನ್ನು ನೋಡಿದಿರಾ?" ಎಂದು ಕೇಳಿದಳು.

"ನೋಡಬೇಕೇನು? ಎಲ್ಲವನ್ನೂ ನೋಡಿರುವೆನು. ಮೊದಲು ಪಶ್ಚಾತ್ತಾಪಕ್ಕೆ ಗುರಿಯಾಗುವ ಕೆಲಸವನ್ನು ಮಾಡಿದ್ದಾನೆ. ಬಳಿಕ ಅದನ್ನು ಮರೆಯುವದಕ್ಕಾಗಿ ಪುಸ್ತಕವನ್ನೋದುತ್ತ ಕುಳಿತಿದ್ದಾನೆ."

"ನೀವು ಇಂತಹ ಕೆಲಸವನ್ನು ಯಾವಾಗ್ಗೆ ಮಾಡುವಿರಿ?" ಸುಭದ್ರೆಯು ನಗೆಮೊಗದಿಂದ ಕೇಳಿದಳು.

"ಯಾವುದನ್ನು? ಪಶ್ಚಾತ್ತಾಪ ಪಡುವ ಕಾರ್ಯವನ್ನೋ?-ಪುಸ್ತಕ ಓದುವ ಕೆಲಸವನ್ನೋ?"

"ಇನ್ನು ಪುಸ್ತಕ ಓದುವ ಕೆಲಸವು ನಿಮ್ಮಿಂದಾಗದು. ಪಶ್ಚಾತ್ತಾಪ ಹೊಂದುವ ಕೆಲಸವನ್ನು ಮಾಡಿರಿ."

"ನಾನು ಮಾಡುವುದೇನು? ನೀನು ಅಣ್ಣನನ್ನು ಕರೆಸಿಕೊಂಡು ತೌರು ಮನೆಗೆ ಹೋಗಿಬಿಟ್ಟರೆ, ತಾನೇ ತಾನಾಗಿ ಘಟಿಸುವುದು."

ಸುಭದ್ರೆಯ ಮನಸ್ಸು ಇಂದು ಒಳ್ಳೇ ಪ್ರಸನ್ನವಾಗಿತ್ತು. ಕಾರಣ ಇವಳು ಸಿಟ್ಟಿಗೇಳದೆ: "ಇಂತಹ ಕೆಲಸವನ್ನು ನಾನೆಂದಿಗೂ ಮಾಡಲಾರೆನು. ಯಾಕೆಂದರೆ, ಧರ್ಮದ ಸಂಕುಚಿತ ವಿಚಾರಕ್ಕೊಳಗಾಗಿ ವ್ರತ-ಉಪವಾಸ ಗಳನ್ನೂ, ಮಡಿ-ಮೈಲಿಗೆಗಳನ್ನೂ ಆಚರಿಸುವ ಶಿಕ್ಷಣವು ಬಾಲ್ಯಕಾಲದಲ್ಲಿ ನನಗೆ ದೊರೆತಿಲ್ಲ," ಎಂದು ನುಡಿದಳು.

ಹೆಂಡತಿಯ ಮಾತು ಭೀಮರಾಯನ ಮನಸ್ಸಿಗೆ ಬರಲಿಲ್ಲ. ಇವನಿಗೆ ಕೋಪವುಂಟಾಯಿತು, ಆದರೂ ಅದನ್ನು ತೋರ್ಪಡಿಸದೆ, ಸಹಜ ಸ್ವರದಿಂದ ಮಾತಾಡಹತ್ತಿದನು: "ನೀನು ಆ ತರದ ಶಿಕ್ಷಣದ ಸುಯೋಗವನ್ನು ಹೊಂದ ದಿರುವುದು ನಿನ್ನ ಪರಮ ದುರ್ಭಾಗ್ಯದ ಸಂಗತಿಯೆಂದು ತಿಳಿ. ನೀನು ಹಾಗೆ ಶಿಕ್ಷಣವನ್ನು ಹೊಂದಿದ್ದರೆ, ನಿನ್ನ ಅಣ್ಣನು ಇಂದು ಇಂತಹ ಘೋರ ವಿಡಂಬನೆ ಯನ್ನನುಭವಿಸುವ ಪ್ರಸಂಗವನ್ನು ತಂದುಕೊಳ್ಳುತ್ತಿದ್ದಿಲ್ಲ" ಭೀಮರಾಯನು ಹೆಂಡತಿ ಇನ್ನೆ ಮಾತ ಬೆಳೆಸಲಿಚ್ಛಿಸದವನಾಗಿ ಬೇರೆ ಕಡೆಗೆ ಹೋಗಿಬಿಟ್ಟನು.

— — —

## ೧೫

...

ಮಾಧ್ವರಾಯನ ವಿದುಷಿಯಾದ ಪತ್ರಗಳನ್ನು ರಂಗರಾಯನಿಗೆ ಕೊಡುವ ಆಲೋಚನೆಯು ಮತ್ತೆ ತಲೆದೋರಿತು. ಸುಭದ್ರೆಯು ಪತಿಯು ಕೋಪ ಗೊಳ್ಳುವನೆಂಬ ಭಯದಿಂದ ಈ ಆಲೋಚನೆಯಲ್ಲಿ ಪ್ರತ್ಯಕ್ಷ ರೀತಿಯಿಂದ ಸೇರಿರ ಲಿಲ್ಲ; ಆದರೆ ಪರೋಕ್ಷರೀತಿಯಿಂದ ಇವಳು ಈ ಆಲೋಚನೆಗೆ ತುಂಬ ಸಹಾ ನುಭೂತಿಯನ್ನು ತೋರುತ್ತಿದ್ದಳು. ಕನ್ಯಾಪಕ್ಷದ ಜನರು ಭೀಮರಾಯನಿಗೆ

ಹುಂಬಾಟಬಿದ್ದರು. ಭೀಮರಾಯನು ಅವರ ಆಗ್ರಹವನ್ನು ಮುರಿಯಲಾರದೆ, ಒಂದು ದಿನ ರಂಗರಾಯನನ್ನು ಸಂದರ್ಶಿಸಿದನು. ಮದುವೆಯ ಮಾತೆತ್ತಿದನು; ಆದರೆ ರಂಗರಾಯನು ಈ ಮೂರನೆಯ ಮದುವೆಗೆ ಒಪ್ಪದೆ, ಇಂತು ಹೇಳಿದನು: "ಆಯುಷ್ಯದ ಬಹುಭಾಗವು ಗತಿಸಿ ಹೋಗಿದೆ—ಇನ್ನು ಅಲ್ಪ ಭಾಗವು ಉಳಿದಿದೆ. ಈ ಅಲ್ಪಕಾಲದ ಸಲುವಾಗಿ ಮತ್ತೆ ಹೊಸ ಹೊರೆಯನ್ನು ಹೇರಿಕೊಳ್ಳಲಾರೆನು—ಮೂರನೆಯ ಮದುವೆಯನ್ನು ಮಾಡಿಕೊಂಡು ಪ್ರಾಪಂಚಿಕ ತಾಪಕ್ಕೊಳಗಾಗಲಾರೆನು. ರಾಮನಿದ್ದಾನೆ ನೀವೆಲ್ಲರೂ ಅವನಿಗೆ ಆಶೀರ್ವದಿಸಿರಿ. ಅವನಿಂದ ನಮ್ಮ ವಂಶವಲ್ಲಿಯು ಹಬ್ಬಲಿ!"

ಭೀಮರಾಯನು ರಂಗರಾಯನ ಈ ನಿಷ್ಕಪಟದ ನುಡಿಗಳನ್ನು ಕೇಳಿದನು. ನಿಜವಾದ ವೇದನೆಯನ್ನನುಭವಿಸಿದನು. ಮುಂದೆ ಮಾತು ಬೆಳೆಸದೆ ಹೋಗಿಬಿಟ್ಟನು. ತರುವಾಯ ಭೀಮರಾಯನು ಪ್ರತಿದಿನ ಕಚೇರಿಯ ಕೆಲಸವು ತೀರುತ್ತಲೆ ರಂಗರಾಯನ ಮನೆಗೆ ಹೋಗಹತ್ತಿದನು. ಮನೆಯಲ್ಲಿ ಗೃಹಿಣಿಯಿಲ್ಲ. ಕೇವಲ ದಾಸದಾಸಿಯರಿಂದ ಬಾಳುವೆಯು ಸಾಗಿತ್ತು. ದಿನಗಳು ಕ್ರಮಿಸುತ್ತ ನಡೆದಂತೆ ಸಂಸಾರದ ಅವ್ಯವಸ್ಥೆಯು ಹೆಚ್ಚುತ್ತ ನಡೆಯಿತು. ಭೀಮರಾಯನು ರಂಗರಾಯನ ಈ ಗೃಹಸ್ಥಿತಿಯನ್ನು ಕಂಡು ಕ್ಲೇಶಕ್ಕೊಳಗಾದನು. ಒಂದು ತಿಂಗಳಾದ ಮೇಲೆ ಮತ್ತೆ ಮದುವೆಯ ಪ್ರಸ್ತಾಪ ತೆಗೆದು, ಹೇಳಹತ್ತಿದನು: "ರಂಗ, ನಾನು ಇನ್ನು ನಿನ್ನ ಈ ಪ್ರಪಂಚದ ಇರವನ್ನು ನೋಡಲಾರದವನಾಗಿದ್ದೇನೆ. ಮನೆಯಲ್ಲಿ ಮನೆಕೆಯು ಗೃಹಿಣಿಯು ಇದ್ದ ಹೊರತು ಬಾಳುವೆಯನ್ನು ಮಾಡುವುದು ಬಹು ಕಷ್ಟಕರವು. ಅದರಲ್ಲೂ ಮುಪ್ಪಿನ ವಯಸ್ಸಿನಲ್ಲಿ......."

ಸುಶೀಲೆಯು ಅಂದು ಭೀಮರಾಯನ ಸಂಗಡ ಬಂದಿದ್ದಳು. ಇವಳು ನಡುವೆ ಬಾಯಿಹಾಕಿ ಮಾತಾಡಹತ್ತಿದಳು: "ರಂಗಣ್ಣನು ಮುದುಕನಾಗಲಿಕ್ಕೆ ಇನ್ನೂ ಬಹಳ ಅವಕಾಶವಿದೆ. ಅಷ್ಟರಲ್ಲಿ ಅಕ್ಕನು ಮತ್ತೆ ಬಾರದಿರಳು. ಕುಪಿತಳಾಗಿ ಹೋದ ಅಕ್ಕನು ತೌರುಮನೆಯಲ್ಲಿ ಎಷ್ಟು ದಿವಸ ಇದ್ದಾಳು?" ಸುಶೀಲೆಯು ಒಮ್ಮೆ ಅಣ್ಣನ ಮೋರೆಯ ಕಡೆಗೆ ನೋಡಿದಳು, ಮತ್ತೊಮ್ಮೆ ರಂಗರಾಯನ ಮುಖದ ಕಡೆಗೆ ನೋಡಿದಳು ಯಾರೂ ಉತ್ತರ ಕೊಡಲಿಲ್ಲ. ರಂಗರಾಯನ ಮುಖವು ಬಾಡಹತ್ತಿತ್ತು; ಆದರೆ ಇವನು ಸುಶೀಲೆಯು ಉತ್ತರದ ಆಶೆಯಿಂದ ತನ್ನ ಕಡೆಗೆ ನೋಡುತ್ತ ಕುಳಿತಿರುವುದನ್ನು ಕಂಡು, "ಇಲ್ಲ. ಇನ್ನು ಅವಳು ಬರುವದಿಲ್ಲ," ಎಂದು ನುಡಿದನು.

ಸುಶೀಲೆಯು ಈ ಮಾತನ್ನು ನಂಬದಾದಳು. ಇವಳು ಅವಿಶ್ವಾಸ ಸೂಚಕ ಸ್ವರದಿಂದ: "ಅಕ್ಕನು ಬರುವದಿಲ್ಲವೆ? ಯಾಕೆ ಬರುವದಿಲ್ಲ? ಬಂದೇ ಬಿಡುವಳು. ಬರಲಿಕ್ಕೆ ವಿಲಂಬವನ್ನೂ ಮಾಡಳು ಈ ತಿಂಗಳು ಮುಗಿಯುವಷ್ಟರಲ್ಲಿ ಬಂದರೂ ಬರಬಹುದು," ಎಂದು ನುಡಿದು ತುಸ ಹೊತ್ತು ಸುಮ್ಮನಾದಳು. ಬಳಿಕ "ಅಣ್ಣಾ, ಅಕ್ಕನು ಬರಲಾರಳೆ?" ಎಂದು ಭೀಮರಾಯನನ್ನು ಕೇಳಿದಳು.

ಭಾಮಿನಿಯು ಪತಿಗೃಹಕ್ಕೆ ಮರಳಿ ಬರುವುದು ಎಂತಹ ಕಠಿಣವೆಂಬುದನ್ನು ಭೀಮರಾಯನು ಅರಿತವನಾಗಿದ್ದನು. ಭಾಮಿನಿಯು ತೌರುಮನೆಗೆ ಹೊರಡುವ ದಿವಸ ರಂಗರಾಯನಾಡಿದ ಮಾತುಗಳ ಮಾಲೆಯನ್ನು ಹೃದಯದಲ್ಲಿ ಧರಿಸಿ ಕೊಂಡಿದ್ದಳು. ಭಾಮಿನಿಯು ಆ ಮಾತುಗಳನ್ನೆಲ್ಲ ಮರೆದು ಮತ್ತೆ ಪತಿಸಾನ್ನಿ ಧ್ಯವನ್ನು ಸೇರಬಯಿಸಬಹುದೆಂಬುದನ್ನು ಭೀಮರಾಯನು ನಂಬಲಾರದವ ನಾಗಿದ್ದನು. ಮೊದಲು ರಂಗರಾಯನ ತಂದೆಯು ಭಾಮಿನಿಯ ವಿಷಯದಲ್ಲಿ ಅವಿಚಾರತೆಯಿಂದ ಆಚರಿಸಿದ್ದನು. ಭಾಮಿನಿಯು ಮತ್ತೆ ಪತಿಗೃಹವನ್ನು ಸೇರಿ ದಾಗ ಸುಭದ್ರೆಯು ಹೊಟ್ಟೆಕಿಚ್ಚಿನಿಂದ ಅವಳನ್ನು ಹಲವು ಬಗೆಗಳಿಂದ ಅಪಮಾನ ಗೊಳಿಸಿದ್ದಾಳೆ. ಇವರಿಬ್ಬರ ಕೃತಿಯು ಮಂದಿರಕ್ಕೆ ಶಿಖರವನ್ನು ಕಟ್ಟುವುದ ಕ್ಕಾಗಿ ರಂಗರಾಯನು ಅಂದಿನ ದಿನ ವಾಗ್ಬಾಣಗಳನ್ನು ಒಳ್ಳೆ ಕಸುವಿನಿಂದ ಪ್ರಯೋಗಿಸಿದ್ದಾನೆ. ಹೀಗಿದ್ದರೂ ಭೀಮರಾಯನು ಭಾಮಿನಿಯ ಸ್ವಗೃಹ ತ್ಯಾಗವನ್ನು ಸಮರ್ಥಿಸಲಾರದವನಾಗಿದ್ದನು. ಒಳ್ಳೆ ಸ್ವಭಾವದ ಭಾಮಿನಿಯು-- ಹಿಂದೂ ಧರ್ಮದ ಶಿಕ್ಷಣವನ್ನೂ, ಸಂಸ್ಕಾರವನ್ನೂ ಹೊಂದಿದ ಸತಿಯು-ಪತಿ ಸಹವಾಸವನ್ನು ಎಂತಹ ಪ್ರಸಂಗವೊದಗಿದರೂ ತ್ಯಜಿಸಲಾಗದೆಂಬುದು ಭೀಮ ರಾಯನ ಸ್ಪಷ್ಟಮತವಾಗಿತ್ತು. ಭೀಮರಾಯನು ಯೋಚಿಸಹತ್ತಿದನು: "ಪುರಾಣ ಮತಾಭಿಮಾನಿಯಾದ ಭಾಮಿನಿಯು ಹಾಗೆ ಒಮ್ಮೆಲೆ ಪತಿಸಾನ್ನಿಧ್ಯವನ್ನು ತ್ಯಜಿಸಿ ಹೋಗಿದ್ದು ಹೇಗೆ? ಇಂತಹ ಹೆಂಗಳೆಯರಿಗೆ ಪತಿಯಂತೆ ಧರ್ಮವೂ ಪ್ರೀತಿಯ ವಿಷಯವು ಭಾಮಿನಿಯು ಪತಿಯಿಂದ ತನ್ನ ಧರ್ಮಾಚರಣೆಗೆ ವಿರೋಧವಾಗು ತ್ತಲೆ ಸಹಿಸದವಳಾಗಿ ಮತ್ತೆ ತೌರುಮನೆಯನ್ನು ಸೇರಲು ಮನಸ್ಸುಮಾಡಿರ ಬಹುದು................"

ಸುಶೀಲೆಯು ಪ್ರಶ್ನೆಮಾಡಿ ಅಣ್ಣನ ಮೋರೆಯ ಕಡೆಗೆ ನೋಡುತ್ತಿ ದ್ದಳು. ಅಣ್ಣನಿಂದ ಉತ್ತರವು ದೊರೆಯದಿರುವುದನ್ನು ನೋಡಿ ಆಶ್ಚರ್ಯಾನ್ವಿತ ಳಾಗಿ: "ಅಣ್ಣಾ, ನನಗೆ ಉತ್ತರ ಕೊಡಲಿಲ್ಲವಲ್ಲ?" ಎಂದು ಕೇಳಿದಳು.

"ನೀನೇನು ಕೇಳಿದೆ?" ಭೀಮರಾಯನು ವಿಚಾರತಂದ್ರಿಯಿಂದೆಚ್ಚತ್ತು ಕೇಳಿದನು.

"ನಾನು ಅಕ್ಕನು ಈ ತಿಂಗಳ ಕೊನೆಯೊಳಗಾಗಿ ಮತ್ತೆ ಇಲ್ಲಿಗೆ ಬರುವಳೆಂದು ಅನ್ನುತ್ತಿರುವೆನು. ನೀನು ನನ್ನ ಈ ಮಾತನ್ನು ನಂಬುವದಿಲ್ಲವೆ?"

ಭೀಮರಾಯನು ತಂಗಿಯ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡದೆ, ಬೇರೊಂದು ವಿಧವಾಗಿ ಮಾತಾಡಹತ್ತಿದನು:"ಅವಳು ಬರಲಿ-ಬಾರದಿರಲಿ. ಬರುವದಿಲ್ಲೆಂದೇ ಈಗ ನಾವು ತಿಳಿಯೋಣ. ರಂಗರಾಯನು ಅವಳಿಲ್ಲದಿದ್ದರೂ ಬಹುದಿವಸ ಬಾಳುವೆ ಸಾಗಿಸಿದ್ದನು—ಮುಂದೆಯೂ ಸಾಗಿಸುವನು. ಕೇವಲ ಅವಳನ್ನೆ ನಂಬಲಿಕ್ಕಾದೀತೆ? ಪ್ರಪಂಚವು ಸುಸೂತ್ರವಾಗಿ ಸಾಗುವದಕ್ಕೆ ಬೇರೊಂದು ಯುಕ್ತಿಯನ್ನು ಹುಡುಕಿಕೊಳ್ಳಬೇಕು ಆ ದಾರಿಯಿಂದ ಮುಂದೆ ಸಾಗಬೇಕು."

ಸುಶೀಲೆಯು ಅಣ್ಣನ ಮಾತಿನ ಇಂಗಿತವನ್ನು ಸರಿಯಾಗಿ ತಿಳಿಯದೆ, ಸುಮ್ಮನೆ ಅಣ್ಣನ ಮೋರೆಯನ್ನು ನೋಡುತ್ತ ಕುಳಿತಳು. ರಂಗರಾಯನು ಇವಳ ವಿಸ್ಮಯಾಕ್ರಾಂತ ಮುಖದ ಕಡೆಗೆ ನೋಡಿ ಮಾತಾಡಹತ್ತಿದನು: "ಅವಳು ತಿರುಗಿ ಬರುವುದು ವಿಹಿತವೆಂದು ನನಗೆ ಅನಿಸುವದಿಲ್ಲ. ಅವಳು ನನ್ನ ಲಗ್ನದ ಹೆಂಡತಿಯಾಗಿದ್ದರೂ ನಾನು ಸಹಧರ್ಮಿಣಿಯೆಂದು ಅವಳನ್ನು ಕರೆಯಲಾರೆನು."

ಭಾಮಿನಿಯ ವಿಷಯದ ಈ ಕುತ್ಸಿತ ಮಾತನ್ನು ಕೇಳಿ ಭೀಮರಾಯನಿಗೆ ಸಿಟ್ಟು ಬಂತು. ಇವನು ಇಂತು ಮಾತಾಡಿದನು: "ಧರ್ಮವೇ ನಮಗಿಲ್ಲವೆಂದ ಬಳಿಕ ಸಹಧರ್ಮಿಣಿಯರೆಲ್ಲಿಂದ ಬರಬೇಕು? ರಂಗ, ನಮ್ಮಂಥವರು ತಾತ್ವಿಕ ಮಾತುಗಳನ್ನಾಡಿ ಉಪಯೋಗವಿಲ್ಲ! ನಾವು ನಮ್ಮ ವ್ಯವಹಾರದ ಅನುಕೂಲತೆಯನ್ನೊಂದು ನೋಡಿಕೊಂಡರೆ ಸಾಕು!"

"ನಮಗೆ ಧರ್ಮವೇ ಇಲ್ಲವೆ?" ರಂಗರಾಯನು ವಿಸ್ಮಯಾತಿರೇಕದಿಂದ ಕೇಳಿದನು.

"ಎಲ್ಲಿದೆ? ತೋರಿಕೊಡು! ನಾವು ಕೆಲಸ ಮಾಡುವೆವು. ಗಳಿಸುವೆವು. ಊಟ ಮಾಡುವೆವು. ವಿಹರಿಸುವೆವು. ಇಷ್ಟಾದರೆ ನಮ್ಮ ಕರ್ತವ್ಯಗಳು ಕೊನೆಗಂಡಂತಾದವು. ಈ ಕೆಲಸಗಳನ್ನು ತೀರಿಸಲಿಕ್ಕೆ ಸಹಧರ್ಮಿಣಿಯೇಕೆ ಬೇಕು? ಆ ಕಾಲದ ಜನರು ಸಂಧ್ಯಾವಂದನೆ-ದೇವಪೂಜೆಗಳನ್ನು ಮಾಡುತ್ತಿದ್ದರು. ವ್ರತ-ಉಪವಾಸಗಳನ್ನಾಚರಿಸುತ್ತಿದ್ದರು. ಹವ್ಯ-ಕವ್ಯಗಳನ್ನು ಮಾಡುತ್ತಿದ್ದರು. ಅವರು ಸದಾ ಧಾರ್ಮಿಕ ಕ್ರಿಯೆಗಳಲ್ಲಿ ತೊಡಗಿರುತ್ತಿದ್ದರು. ಅವರಿಗೆ ಸಹ

ಧರ್ಮಿಣಿಯರ ಆವಶ್ಯಕತೆಯಿತ್ತು. ನಮಗೆ ಆ ಸಹಧರ್ಮಿಣಿಯರ ಗೊಡವೆ ಯಾಕೆ!'' ಭೀಮರಾಯನು ಆವೇಶದಿಂದ ಮಾತಾಡಿದನು.

ರಂಗರಾಯನು ಮರ್ಮಾಹತನಾಗಿ ಇಂತು ಕೇಳಿದನು: "ಯಾರು ವ್ರತೋಪವಾಸಗಳನ್ನೂ, ಹೋಮ-ಹವನಗಳನ್ನೂ ಮಾಡುವರೋ ಅವರಿಗಷ್ಟೆ ಸಹಧರ್ಮಿಣಿಯರ ಆವಶ್ಯಕತೆಯೆ? ನಮಗೆ ಸಹಧರ್ಮಿಣಿಯರು ಬೇಡವೆ?....''

ಭೀಮರಾಯನು ರಂಗರಾಯನನ್ನು ಮುಂದೆ ಮಾತಾಡಗೊಡದೆ, ಹೇಳ ಹತ್ತಿದನು:"ಬೇಡ, ನಿಜವಾಗಿಯೂ ನಮಗೆ ಸಹಧರ್ಮಿಣಿಯರು ಬೇಡ. ನೀನೂ ಹಿಂದುವು, ನಾನೂ ಹಿಂದುವು; ಆದರೆ ಕ್ರಿಯಾಕಲಾಪಗಳಿಲ್ಲದ ಹಿಂದುಗಳು ನಾವು! ನಾವು ಪೂಜೆಯನ್ನು ಮಾಡುವದಿಲ್ಲ. ದೇವಮಂದಿರಕ್ಕೆ ಹೋಗುವದಿಲ್ಲ. ಅವತಾರಿಕರ ಹೆಸರೆತ್ತಿ ಮನಬಂದಂತೆ ಚರ್ಚೆಯನ್ನೂ ಮಾಡುವದಿಲ್ಲ. ನಮ್ಮ ಪ್ರಮದೆಯರು ನಮಗಿಂತಲೂ ನಿರೀಹರು. ನಾವು ಸಹಜ ಮನುಷ್ಯರು. ವ್ಯವಹಾರಕ್ಕೆ ಉಪಯುಕ್ತರು. ಇಂತಹ ವ್ಯಾವಹಾರಿಕ ಮನುಷ್ಯರು ಐದಾರು ಅಕ್ಷರಗಳನ್ನೊಳಗೊಂಡು ಉಚ್ಚರಿಸಲಿಕ್ಕೆ ಕಠಿಣವಾದ ದೊಡ್ಡ ಸಹಧರ್ಮಿಣಿಯನ್ನು ಕಟ್ಟಿಕೊಂಡು ಮಾಡುವದೇನು? ನಮಗೆ ಸಣ್ಣ ಸ್ತ್ರೀಯೊಬ್ಬಳಾದರೆ ಸಾಕು. ನಮ್ಮ ಎಲ್ಲ ಕೆಲಸಗಳು ಸುಸೂತ್ರವಾಗಿ ಸಾಗುವವು.'' ಕ್ಷಣಕಾಲ ಸುಮ್ಮನಿದ್ದು ಭೀಮರಾಯನು ಮತ್ತೆ ಹೇಳಹತ್ತಿದನು: "ನೀನು ಮೂರನೆಯ ಮದುವೆಗೆ ಒಪ್ಪುವದು ಯೋಗ್ಯವೆಂದು ನನಗೆ ಅನಿಸುತ್ತಿದೆ. ಮದುವೆಯು ಎರಡು ಸಾರೆ ಆಗಿ ಹೋಗಿದೆ. ಈ ಮೂರನೆಯ ಸರತಿಗೆ ಭಯಗೊಳ್ಳುವದೇಕೆ? ಗಟ್ಟಿಮನಸ್ಸು ಮಾಡಿ ಒಪ್ಪಿಕೊಂಡು ಬಿಡು. ಮಧ್ವರಾಯನು ನಿನ್ನ ಬೆನ್ನ ಬಿಡದವನಾಗಿದ್ದಾನೆ. ನಿನ್ನ ಸಹೋದರಿಯ ಭಯಾನಕ ಇಚ್ಛೆಯೂ ಹೀಗೆಯೆ ಇದೆ. ನನ್ನ ಮತವೂ ಅನುಕೂಲವಿದೆ. ಹೀಗಿರಲು, ನೀನು ಒಲ್ಲೆನೆನ್ನುವದು ಸರಿಯೆ?''

ರಂಗರಾಯನ ಮುಖವು ಕಪ್ಪಿಟ್ಟು ಹೋಯಿತು. ಇವನು ಎದ್ದು ನಿಂತು "ಭೀಮ, ನೀನು ನನಗೆ ಪರಿಹಾಸ ಮಾಡುತ್ತಿರುವೆ!'' ಎಂದು ನುಡಿದನು.

ಸುಶೀಲೆಯು ಗಾಬರಿಯಾದಳು. ಭೀಮರಾಯನು ಭೀತನಾಗಿ ಮಾತಾಡ ಹತ್ತಿದನು: "ಇಲ್ಲ, ನಾನು ಪರಿಹಾಸ ಮಾಡಬಯಿಸಿದವನಲ್ಲ. ನಿಜವನ್ನೆ ನುಡಿದವನು. ಒಂದುವೇಳೆ ಅದು ಪರಿಹಾಸವಾಗಿದ್ದರೆ, ನಿನಗಿಂತಲೂ ನನಗೆ ಹೆಚ್ಚಾಗಿ ತಾಗುವಂತಿದೆ!''

ರಂಗರಾಯನು ಪ್ರತಿ ಮಾತಾಡಲಿಲ್ಲ. ಕೇವಲ ಸ್ತಬ್ಧನಾಗಿ ನಿಂತು ಕೊಂಡಿದ್ದನು.

———

## ೧೬

ರಂಗರಾಯನ ಕೋಪವನ್ನೂ ಆವೇಶವನ್ನೂ ನೋಡಿ ಭೀಮರಾಯನು ಇನ್ನು ಮದುವೆಯ ಸಂಬಂಧದ ಮಾತ ಬೆಳೆಸುವುದು ಅನುಪಯುಕ್ತವಷ್ಟೇ ಅಲ್ಲ; ಘಾತುಕವೂ ಆಗಬಹುದೆಂದು ಭಾವಿಸಿದನು. ನಾಲ್ಕೆಂಟು ದಿನಗಳ ತರುವಾಯ ರಂಗರಾಯನು ಶಾಂತವಾಗಿದ್ದ ಸಮಯವನ್ನು ಸಾಧಿಸಿ ಬಂದು ಮತ್ತೆ ಮದುವೆಯ ಮಾತು ತೆಗೆಯಬಹುದೆಂದು ಬಗೆದು ತಂಗಿಯನ್ನು ಕರೆದುಕೊಂಡು ಮನೆಗೆ ಹೊರಟನು.

ಮುಂದೆ ಒಂದು ವಾರದಲ್ಲಿಯೆ ಭೀಮರಾಯನು ಕಚೇರಿಯ ಕೆಲಸಕ್ಕಾಗಿ ಮುಂಬಯಿಗೆ ಹೊರಡುವ ಪ್ರಸಂಗ ಬಂತು. ಇವನು ಮುಂಬಯಿಗೆ ಹೊರಡುವ ಮೊದಲು ಹೆಂಡತಿಯನ್ನು ಕರೆದು ಇಂತು ನುಡಿದನು:—"ಮಧ್ವರಾಯನು ತನ್ನ ಮಗಳನ್ನು ರಂಗರಾಯನಿಗೆ ಕೊಡಬೇಕೆಂಬ ಉತ್ಕಟೇಚ್ಛೆಯುಳ್ಳವನಾಗಿದ್ದಾನೆ. ವಿದುಷಿಯಾದ ಕನ್ಯೆಯು ರಂಗರಾಯನ ಕೈ ಹಿಡಿಯಲು ಸಿದ್ಧಳಿದ್ದಾಳೆ. ಆದರೆ ರಂಗರಾಯನು ಮಾತ್ರ ಇದುವರೆಗೆ ಸಮ್ಮತಿಯನ್ನು ತೋರ್ಪಡಿಸಿಲ್ಲ. ನಾವು ನಿರಾಶರಾಗುವ ಕಾರಣವಿಲ್ಲ. ನಾನು ಇನ್ನು ಕೆಲವು ದಿನಗಳಲ್ಲಿಯೆ ರಂಗರಾಯನ ಮನಸ್ಸನ್ನು ಒಲಿಸುವೆನು—ಅವನು ಈ ವಿವಾಹಕ್ಕೆ ಒಪ್ಪುವಂತೆ ಮಾಡುವೆನು. ಇಲಿಯು ಖಾದ್ಯವನ್ನು ನೋಡಿದೆ. ಆಶೆಯಿಂದ ಬಲೆಯ ಕಡೆಗೆ ತಿರುಗಿದೆ. ಇನ್ನು ಅದನ್ನು ಬಲೆಯಲ್ಲಿ ಕೆಡಹುವದಕ್ಕೆ ಅವಕಾಶ ಹಿಡಿಯದು.

ಭೀಮರಾಯನು ತನ್ನ ಹೆಂಡತಿಯೊಡನೆ ಬಹು ದಿನಗಳ ತರುವಾಯ ಹೀಗೆ ಸದ್ಭಾವನೆಯಿಂದ ಮಾತಾಡಿದ್ದನು. ಸುಭದ್ರೆಯು ಆನಂದಿತಳಾದಳು. ಇವಳು ಸುಶೀಲೆಯ ಮುಖದಿಂದ ಕೆಲವು ಸಂಗತಿಗಳನ್ನು ಕೇಳಿ ತಿಳಿದಿದ್ದಳು. ಮಾತಾಡಹತ್ತಿದಳು: "ನೀವು ಭಾವಿಯ ವರನ ಹಿತೈಷಿಗಳೆಂದು ನಾನು ತಿಳಿದಿದ್ದೆನು. ನೀವು ಅಣ್ಣನ ವಿವಾಹಕ್ಕೆ ಮನಸ್ಸು ಮಾಡಬಹುದೆಂಬ ಮಾತು ನನಗೆ ಅಸಂಭವನೀಯವಾಗಿ ತೋರುತ್ತಿತ್ತು. ಆದರೆ ಇಂದು ನೀವೆ ಹೀಗೆ ನುಡಿಯುತ್ತಿರುವುದರಿಂದ ನಾನು ನಂಬಬೇಕಾಗಿದೆ."

"ಅಹುದು. ಈಗ್ಗೆ ಒಂದೆರಡು ತಿಂಗಳ ಹಿಂದೆ ನಾನು ಈ ವಿವಾಹಕ್ಕೆ ವಿರೋಧವುಳ್ಳವನಾಗಿದ್ದೆನು; ಆದರೆ ಈಗ ರಂಗರಾಯನ ಮೂರನೆಯ ಮದ

ವೆಗೆ ನಾನು ವಿರುದ್ಧನಾಗಿಲ್ಲವಿಷ್ಟೆ ಅಲ್ಲ; ಈ ವಿವಾಹವು ಆಗುವದು ಅವಶ್ಯವೆಂದು ಭಾವಿಸಿ ಪ್ರಯತ್ನಕ್ಕೆ ತೊಡಗಿದ್ದೇನೆ. ಇದರಿಂದ ನೀನು ನಾನು ಭಾಮಿನಿಯ ಶತ್ರುವೆಂದು ಮಾತ್ರ ಭಾವಿಸಬೇಡ. ನಾನು ಹಿಂದೆಯೂ ಭಾಮಿನಿಯ ಹಿತಚಿಂತಕನಾಗಿದ್ದೆನು —ಈಗಲೂ ಆಗಿರುವೆನು —ಮುಂದೆಯೂ ಇರುವೆನು. ನಾನು ಅನುದಿನವೂ ಅವಳ ಶುಭಾಕಾಂಕ್ಷಿಯು; ಆದರೆ ಯಾವದು ಆಗಲಾರದ್ದೊ, ಅದಕ್ಕಾಗಿ ಪ್ರಯತ್ನಿಸಿ ಉಪಯೋಗವಿಲ್ಲ! ಇನ್ನು ಭಾಮಿನಿ ಹಾಗು ರಂಗರಾಯರಿಗೆ ಕೂಡಿ ನಡೆಯದು! ಹೀಗಿರಲು, ಇವರ ಮಿಲನಕ್ಕಾಗಿ ನಾನು ಯತ್ನಿಸುವುದು ಹಿತಕರವಲ್ಲ. ಕಾರಣ ನಾನು ಈಗ ರಂಗರಾಯನ ನವೀನ ವಿವಾಹಕ್ಕೆ ಮನಸ್ಸು ಮಾಡಿದವನಾಗಿದ್ದೇನೆ."

ಸುಭದ್ರೆಯು ಉಪಹಾಸಸೂಚಕ ನಗೆಯಿಂದ ಮಾತಾಡಹತ್ತಿದಳು: "ನೀವು ಪುರುಷರಾದ್ದರಿಂದ ಭಾಮಿನಿಯ ಸ್ವಭಾವದ ಇಂಗಿತವನ್ನರಿತುಕೊಳ್ಳಲಿಕ್ಕೆ ತಡವಾಯಿತು, ಆದರೆ ನಾನು ಅವಳನ್ನು ನೋಡುತ್ತಲೆ, ಇವಳೊಡನೆ ನಾವು ವ್ಯವಹರಿಸುವುದು ಅಸಂಭವವೆಂಬುದನ್ನು ಗೊತ್ತುಮಾಡಿಕೊಂಡಿದ್ದೆನು. ಗಂಡಸರಿಗೆ ಹೆಂಗಸರ ಸ್ವಭಾವದ ರಹಸ್ಯವು ಬೇಗ ಹೊಳೆಯದು. ಹೆಂಗುಸರು ಹೆಂಗುಸರ ಸ್ವಭಾವದ ಇಂಗಿತವನ್ನು ಕೂಡಲೆ ಕಂಡುಹಿಡಿಯಬಲ್ಲರು.''

"ಇರಬಹುದು ಭಾಮಿನಿಯು ಪತಿಯೊಡನೆ ಕೂಡಿಯಿರುವದು ಅಸಂಭವವಾದ್ದರಿಂದಲೆ ಹೊರಟು ಹೋದಳು. ಅವಳು ಹೀಗೆ ವರ್ತಿಸದೆ, ಬೇರೊಂದು ವಿಧವಾಗಿ ಆಚರಿಸಿದ್ದರೆ ಹೇಗಾಗುತ್ತಿತ್ತೆಂಬದನ್ನು ಕಲ್ಪಿಸಿ, ನಾವು ವಾದ-ವಿವಾದ ಮಾಡುವುದರಲ್ಲಿ ಪ್ರಯೋಜನವಿಲ್ಲ. ಆಗ ನಾನು ಭಾಮಿನಿಯ ಸ್ವಭಾವವನ್ನು ಸರಿಯಾಗಿ ಅರಿಯಲಿಲ್ಲವೆಂಬುದು ನಿಜವು. ಈಗ ಅರಿತಿರುವೆನಾದ್ದರಿಂದ ರಂಗರಾಯನ ಮೂರನೆಯ ಮದುವೆಗೆ ಉದ್ಯುಕ್ತನಾಗಿರುವೆನು ''

"ಸರಿಯಾಗಿ ಮಾತಾಡಿದಿರಿ. (ದೋಷವನ್ನು ಗುಣವೆಂದು ಸಾಧಿಸಬಯಸುವುದರಲ್ಲಿ ಹಿತವಿಲ್ಲ. ದೋಷವನ್ನೊಪ್ಪಿಕೊಂಡು ಸುಧಾರಿಸಿಕೊಳ್ಳುವುದು ಹಿತಕರವು. ನೀವು ಒಮ್ಮಿಂದೊಮ್ಮೆಲೆ ಜಪ-ತಪಗಳನ್ನು ಮಾಡುವವರ ಹಾಗು ವ್ರತೋಪವಾಸಗಳನ್ನಾಚರಿಸುವವರ ಒಟ್ಟಂಗಿಗಳಾಗಿರುವುದನ್ನು ನೋಡಿ ನಾನು ಬಹು ಭಯಗೊಂಡಿದ್ದೆನು. ನಾವೂ ಹಿಂದುಗಳು, ಮುಸಲ್ಮಾನರಲ್ಲ, ಕ್ರಿಶ್ಚಿನರಲ್ಲ; ಆದರೆ ನಾವೇ ಶ್ರೇಷ್ಠರು, ಉಳಿದವರೆಲ್ಲರು ಹೀನರು. ಕೀಳು ಜಾತಿಯವರನ್ನು ಮುಟ್ಟುತ್ತಲೆ ನಮ್ಮ ಜಾತಿಯು ಹಾಳಾಗಿ ಹೋಗುವುದು,

ಎಂದು ಅಭಿಮಾನಪಡುವುದು ಸಮ್ಮತವೇ? ಜಾತಿ ನಿಯಮಗಳನ್ನು ಪಾಲಿಸುವವರಷ್ಟೇ ಸ್ವರ್ಗಕ್ಕೆ ಹೋಗುವರು. ಉಳಿದವರೆಲ್ಲ ನರಕಭೋಗಿಗಳಾಗುವರು; ಎಂದು ಹೇಳುವುದು ಅವಳ ತೌರು ಮನೆಯಲ್ಲಿ ಸಮ್ಮತವಾಗಬಹುದು:—ಇಲ್ಲಿ ನಡೆಯದು ಇಲ್ಲಿ ತನ್ನಾಟವು ನಡೆಯದ್ದರಿಂದಲೆ ಅವಳು ಪತಿಯ ಬಳಿಯಲ್ಲಿ ಆಶ್ರಯವನ್ನು ಹೊಂದಲಿಲ್ಲ!''

ಈ ಮಾತು ಸತ್ಯವಲ್ಲ; ಅಸತ್ಯವೂ ಅಲ್ಲ. ಪುಸಿ-ದಿಟಗಳ ಸರಿಬೆರಕೆಯದು. ಕಾರಣ ಭೀಮರಾಯನು ಉತ್ತರ ಕೊಡಬಯಿಸದೆ, ಹೆಂಡತಿಯ ಮೋರೆಯ ಕಡೆಗೆ ನೋಡುತ್ತ ನಿಂತನು. ಈ ಸಮಯದಲ್ಲಿ ಸುಶೀಲೆಯು ಬಂದು "ಅಣ್ಣಾ, ಮತ್ತೇನಾಯಿತು?'' ಎಂದು ಕೇಳಿದಳು.

ಸುಭದ್ರೆಯು ತನ್ನ ವಾಕ್ಪ್ರವಾಹವನ್ನು ಭರದಿಂದ ಹರಿಬಿಟ್ಟಳು:-"ಭಾಮಿನಿಯು ಜಾತಿರಕ್ಷಣೆಯೇ ತನ್ನ ಶ್ರೇಷ್ಠತಮ ಕರ್ತವ್ಯವೆಂದು ಭಾವಿಸಿದಳಲ್ಲವೆ? ತನ್ನ ಆಚಾರ ರಕ್ಷಣೆಗಾಗಿ ಪತಿಯನ್ನು ಸಹ ತೊರೆದು ಹೋಗಲಿಕ್ಕೆ ಹಿಂಜರಿಯದಾದಳಲ್ಲವೆ? ನೀವು ಅವಳ ಕೃತಿಯನ್ನು ಸಮರ್ಥಿಸುವಿರಾ? ನನ್ನ ಸಲುವಾಗಿ ಅಣ್ಣನು ಅವಳನ್ನು ತಿರಸ್ಕರಿಸಿದಂತೆ, ಅವಳ ಸಲುವಾಗಿ ನೀವು ನನ್ನ ಮನಸ್ಸಿಗೆ ನಡುವಂತೆ ಮಾತಾಡಲಿಲ್ಲವೆ? ನಾನು ನಿಮ್ಮ ಆ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಂಡು ತೌರುಮನೆಗೆ ಹೋಗಬೇಕಾಗಿತ್ತೆ? ಹೀಗೆ ನಾನು ಹೋಗಿದ್ದರೆ ನೀವು ನನ್ನ ಕೆಲಸವನ್ನು ಸ್ತುತಿಸುತ್ತಿದ್ದಿರಾ?''

"ಇಲ್ಲ, ನಾನು ಹೀಗೆಂದೂ ಅಂದವನಲ್ಲ"

"ಹೀಗೆ ಅನ್ನಲಾರಿರಿಯೆಂಬುದನ್ನು ನಾನು ಬಲ್ಲೆನು.'' ಬಳಿಕ ಸುಶೀಲೆಯ ಕಡೆಗೆ ಮೋರೆ ಮಾಡಿ ಮಾತಾಡತೊಡಗಿದಳು: "ನಿನ್ನ ಈ ಸಹೋದರರು ಭಾಮಿನಿಯ ಅಪರಿಚಿತ ಬಹಿರಾಚರಣೆಯನ್ನು ನೋಡಿ, ಒಮ್ಮೆಲೆ ಮೋಸಹೋಗಿಬಿಟ್ಟಿದ್ದರು. ಒಟ್ಟಂಗಿಯಂತೆ ಅವಳ ವರ್ಣನೆಗೆ ಬದ್ಧಕಂಕಣರಾಗಿದ್ದರು. ತಾಯಿ-ತಂದೆಗಳು ನನಗೆ ಹಿಂದೂಧರ್ಮದ ಸಂಕುಚಿತ ವಿಚಾರದ ಆಚಾರ-ರೀತಿ-ನೀತಿಗಳ ಶಿಕ್ಷಣವನ್ನು ಕೊಟ್ಟಿಲ್ಲವೆಂಬುದು ನಿಜವು; ಆದರೆ ಅವರು ನನಗೆ ಯಾವ ತರದ ಶಿಕ್ಷಣವನ್ನೂ ನೀಡಿಲ್ಲವೆಂದು ಅನ್ನಲಿಕ್ಕಾದೀತೆ? ನಾನು ನನ್ನ ಜನನೀ-ಜನಕರಿಂದ ಪಡೆದ ಶಿಕ್ಷಣವು ಭಾಮಿನಿಯು ಹೊಂದಿದ ಶಿಕ್ಷಣಕ್ಕಿಂತ ಮೇಲ್ತರದ್ದು; ಹೆಚ್ಚು ಹಿತಕರವಾದುದು.'' ಸುಭದ್ರೆಯು ಕೊಂಚ ನಕ್ಕು ಮತ್ತೆ ಮಾತಾಡಹತ್ತಿದಳು: "ನೀನು ಭಾಮಿನಿಯ ಸಹವಾಸದಲ್ಲಿದ್ದು

ಹಲವು ವಿಷಯುಗಳನ್ನು ಕಲಿತುಕೊಳ್ಳಬೇಕೆಂದು ನಿನ್ನ ಈ ಸಹೋದರರು ಹೇಳಿದ್ದರಷ್ಟೆ? ನೀನು ಅವಳ ಬಳಿಯಲ್ಲಿ ಯಾವ ಯಾವ ವಿಷಯುಗಳನ್ನು ಅಭ್ಯಾಸಿಸಿದೆಯೆಂಬುದನ್ನು ಸಾವಧಾನತೆಯಿಂದ ಕೇಳಿಕೊಳ್ಳುವ ಅವಕಾಶವು ನನಗಿಲ್ಲದಾಗಿದೆ. ನಾನು ಹೋಗುವೆನು. ನೀನು ಯಾವ ವಿಷಯುಗಳನ್ನು ಎಷ್ಟು ಕಲಿತಿರುವೆಯೆಂಬುದನ್ನು ನಿನ್ನ ಈ ಸಹೋದರರಿಗೇ ವಿವರಿಸಿ ಹೇಳು '' ಸುಭದ್ರೆಯು ನಗುತ್ತ ಬೇರೆ ಕಡೆಗೆ ಹೊರಟು ಹೋದಳು.

ಭೀಮರಾಯನು ಸುಮ್ಮನಿದ್ದನು. ತನ್ನ ತಂಗಿಯ ಸಮಕ್ಷದಲ್ಲಿ ಹೆಂಡತಿಯು ಹೂಡಿ ಎಸೆದಿದ್ದ ವಾಗ್ಬಾಣಗಳು ಭೀಮರಾಯನಿಗೆ ಚೆನ್ನಾಗಿ ತಾಕಿದ್ದುವು. ಇವನು ವಿಷಾದಾತಿರೇಕದಿಂದ ಹೆಂಡತಿಗೆ ಉತ್ತರಕೊಡುವ ಮನಸ್ಸು ಮಾಡಲಿಲ್ಲ. ಭೀಮರಾಯನು ಹಿಂದೂಧರ್ಮದ ಆಚಾರ-ವಿಚಾರಗಳನ್ನು ಸರಿಯಾಗಿ ಅರಿತುಕೊಂಡವನಲ್ಲ; ಆಚರಿಸಿದವನಲ್ಲ. ಆದರೂ ರಮಣಿಯರ ಆಚಾರನಿಷ್ಠೆಯೂ, ಪ್ರಾಚೀನ ಆರ್ಯಮಹಿಳೆಯರ ಜೀವನ ಚರಿತೆಯೂ ಇವನ ಮನಸ್ಸನ್ನು ಚೆನ್ನಾಗಿ ಆಕರ್ಷಿಸಿಕೊಂಡಿದ್ದುವು. ಕಾರಣ ಇವನು ಅಕಸ್ಮಾತ್ತಾಗಿ ಬಂದು ಆತ್ಮೀಯಳಾಗಿದ್ದ ಭಾಮಿನಿಯ ಆಚಾರ-ವ್ಯವಹಾರಗಳನ್ನು ನೋಡಿ ಮುಗ್ಧನಾಗಿ ಹೋಗಿದ್ದನು. ಅಂತೆಯೆ ಇವನು ಭಾಮಿನಿಯ ಪಕ್ಷಪಾತಿಯಾಗಿ ಸುಭದ್ರೆಯ ಮನಸ್ಸು ನೊಯ್ಯುವಂತೆ ಮಾತಾಡಲಿಕ್ಕೆ ಹಿಂದೆಗೆದಿದ್ದಿಲ್ಲ. ಭಾಮಿನಿಯು ಸ್ತ್ರೀಸಮಾಜಕ್ಕೆ ಆದರ್ಶಸ್ವರೂಪಳೆಂದೂ, ಹೆಂಗಳೆಯರು ಭಾಮಿನಿಯ ಆಚಾರ-ವಿಚಾರಗಳನ್ನು ಅನುಕರಿಸುವುದು ಹಿತಕರವೆಂದೂ ಭಾವಿಸಿದ್ದನು. ಈ ಕಾರಣದಿಂದ ಇವನು ಪರಿಚಿತ ಹೆಂಗುಸರೊಡನೆ ಮಾತಾಡುವ ಪ್ರಸಂಗ ದೊರೆದಾಗ ಗೌರವದಿಂದ ಭಾಮಿನಿಯ ಹೆಸರನ್ನು ಉಲ್ಲೇಖಿಸುತ್ತಿದ್ದನು; ಹಾಗು ಭಾಮಿನಿಯ ಆಚಾರ-ವಿಚಾರಗಳನ್ನು ಹೊಗಳುತ್ತಿದ್ದನು, ಆದರೆ ಭೀಮರಾಯನು ಇಂದು ತನ್ನ ಹಿಂದಿನ ಈ ಕಾರ್ಯಕ್ಕಾಗಿ ತಲೆಬೊಗ್ಗಿಸಬೇಕಾಗಿ ಬಂದಿತ್ತು. ಹೆಂಡತಿಯ ವಾಗ್ಬಾಣಗಳನ್ನು ಸುಮ್ಮನಿದ್ದು ಸಹಿಸಿಕೊಳ್ಳುವ ಪ್ರಸಂಗವೊದಗಿತ್ತು. ಈ ಸಮಯದಲ್ಲಿ ಇವನು ಭಾಮಿನಿಯು ತನ್ನ ಮನಸ್ಸಿಗೆ ಸರಿಗಂಡ ರೀತಿಯಲ್ಲಿ ವ್ಯವಹರಿಸಿದ್ದಾಳೆ, ಅವಳ ಈ ಆಚರಣೆಯಿಂದ ಬೇರೆವರಿಗೇನೂ ಅಪಾಯವಾಗಿಲ್ಲ. ಹೀಗಿರಲು ಅವಳನ್ನು ನಿಂದಿಸುವುದೇಕೆ? ಎಂದು ಮಾತಾಡಿ ಹೆಂಡತಿಗೆ ಉತ್ತರಕೊಡಬೇಕೆಂದಿದ್ದನ ; ಆದರೆ ಹೀಗೆ ಮಾತಾಡಲಿಕ್ಕೆ ಇವನ ನಾಲಿಗೆ ಏಳಲಿಲ್ಲ.

ಭೀಮರಾಯನು ಹೆಂಡತಿಯು ಹೋದ ಬಳಿಕ ಕೊಂಚ ಕಾಲದ ಮೇಲೆ

ತಂಗಿಯನ್ನುದ್ದೇಶಿಸಿ ಸಂದಿಗ್ಧಸ್ವರದಿಂದ ಮಾತಾಡಹತ್ತಿದನು: "ಯಾವ ವಿಷಯದಲ್ಲೂ ಅತಿಶಯತೆಯು ಒಳ್ಳೇದಲ್ಲ. ಅಂತೆಯೇ ಹಿರಿಯರು 'ಅತಿಯಾದರೆ ಗತಿಗೆಡುವುದು' ಎಂದು ಹೇಳಿದ್ದಾರೆ ಹಿಂದೂ ಧರ್ಮಾಭಿಮಾನಿಗಳು ಈ ದೃಷ್ಟಿಯಿಂದ ಧಾರ್ಮಿಕ ಆಚಾರ-ವಿಚಾರಗಳಲ್ಲಿ ಪರಿವರ್ತನೆ ಮಾಡಿಕೊಳ್ಳಬೇಕು, ಹಾಗು ಸಾಮಾನ್ಯಜನರಿಗೆ ಈ ಪರಿವರ್ತನೆಯ ಇಂಗಿತವನ್ನು ತಿಳುಹಿಕೊಡಬೇಕು. ಇದು ಹೇಗೆ ಇರಲಿ, ಧಾರ್ಮಿಕ ಆಚರಣೆಯು ಭಾಮಿನಿಯಂಥವರಿಗಿಂತ ಧರ್ಮಲಂಡರಾದ ನಾವು ಹೀನರೆಂಬದನ್ನು ಒಪ್ಪಿಕೊಂಡಹೊರತು ಗತ್ಯಂತರವಿಲ್ಲ"

ದಂಪತಿಗಳ ವಾದ-ವಿವಾದ ಸಮಯದಲ್ಲಿ ಸುಶೀಲೆಯು ಸುಮ್ಮನೆ ಕುಳಿತಿದ್ದಳು. ಈಗ ಸುಭದ್ರೆಯು ಹತ್ತಿರಿರದಿದ್ದರೂ ಸುಶೀಲೆಯು ಉತ್ತರಕೊಡಬಯಸಲಿಲ್ಲ.

ಇಂದಿನ ರಾತ್ರಿಯಲ್ಲಿ ಭೀಮರಾಯನು ಮುಂಬಯಿಗೆ ಹೊರಡುವ ಸಮಯದಲ್ಲಿ ಹೆಂಡತಿಗೆ ಇಂತು ಹೇಳಿದನು: "ನಾನು ನಾಲ್ಕಾರು ದಿವಸಗಳ ತರುವಾಯ ಬರುವೆನು. ಈ ಅವಧಿಯಲ್ಲಿ ಮಧ್ವರಾಯನೆ ಆಗಲಿ, ಅವನ ಪಕ್ಷದ ಜನರೆ ಆಗಲಿ ಬಂದು ವಿಚಾರಿಸಿದರೆ, ನಾನು ಬಂದ ಬಳಿಕ ಮದುವೆಯ ಮಾತನ್ನು ಬಗೆಹರಿಸಿ ಕೊಡುವೆನೆಂದು ಹೇಳು."

"ಭಾಮಿನಿಯು ಇನ್ನು ಇಲ್ಲಿಗೆ ಬರುವದಿಲ್ಲೆಂದೇ ನಿಮ್ಮ ನಿರ್ಧಾರಣೆಯಾಗಿರುವುದೇನು?"

"ಅಹುದು. ಅವಳು ಇನ್ನು ಇಲ್ಲಿಗೆ ಬರುವದಿಲ್ಲ—ಬಂದರೂ ಪ್ರಯೋಜನವಿಲ್ಲ. ನಾನು ಈ ಬಗ್ಗೆ ಬಹಳವಾಗಿ ಯೋಚಿಸಿರುವೆನು. ನೀನು ಅಂದದ್ದೇ ಸರಿಯೆಂದು ನನಗೆ ಈಗ ಅನಿಸಹತ್ತಿದೆ. ರಂಗರಾಯನಿಗಿಂತಲೂ ಭಾಮಿನಿಯ ಅಪರಾಧವು ದೊಡ್ಡದು. ಯಾವ ಶಿಕ್ಷಣವು ಮನುಷ್ಯನನ್ನು ಇಂತಹ ಸಂಕುಚಿತ ವಿಚಾರಗಳಿಗೊಳಗು ಮಾಡುವದೊ, ಸ್ವಾರ್ಥಪರನನ್ನಾಗಿ ಮಾಡುವದೊ ಆ ಶಿಕ್ಷಣಕ್ಕೆ ಒಂದು ಕಾಲದಲ್ಲಿ ಎಷ್ಟೆ ಬೆಲೆಯಿದ್ದರೂ, ಈಗದಕ್ಕೆ ಮಹತ್ವ ಕೊಡುವಂತಿಲ್ಲ ಆ ಶಿಕ್ಷಣವನ್ನು ಇನ್ನು ನಮ್ಮೊಳಗೆ ಬಳಿಕೆಯಲ್ಲಿ ತಂದು ಪ್ರಯೋಜನವಿಲ್ಲ ಭಾಮಿನಿಯು ಧರ್ಮದ ನಿಜವಾದ ತತ್ವಗಳನ್ನರಿದವಳಲ್ಲ. ಕೇವಲ ಬಾಹ್ಯಾಚರಣೆಗಳಲ್ಲಿ ಮೆಯ್ಮರೆದವಳು. ಅಂತೆಯೆ ಅವಳು ಸ್ವಗೃಹವನ್ನು ತ್ಯಜಿಸಿ ಹೋಗಿ ಬಿಟ್ಟಳು. ಇರಲಿ, ನಾನೀಗ ಹೋಗಿ ಬರುವೆನು." ಭೀಮರಾಯನು ಹೊರ ಹೊರಟನು. ಮೋಟರಿನಲ್ಲಿ ಕುಳಿತನು.

ಭೀಮರಾಯನು ಕಚೇರಿಯ ಕೆಲಸವನ್ನು ತೀರಿಸಿಕೊಂಡು ತಿರುಗಿ ಬರ ಬೇಕಾದರೆ, ಹದಿನೈದು ದಿನಗಳು ಹತ್ತಿದುವು ಇವನು ಮರುಳಿ ಮನೆಗೆ ಬಂದ ಕೂಡಲೆ, ಮೊದಲು ಸುಶೀಲೆಯನ್ನು ಕಂಡನು. ಸುಶೀಲೆಯು:-ರಂಗಣ್ಣನು ಆರು ತಿಂಗಳ ರಜೆ ತಕ್ಕೊಂಡು ಮಂಚಾಲೆಗೆ ಹೋಗಿರುವನೆಂದೂ, ಸಂಗಡ ರಾಮನನ್ನೂ ಕರೆದೊಯ್ದನೆಂದೂ ಹೇಳಿದಳು.

"ಹೀಗೆ ಒಮ್ಮೆಂದೊಮ್ಮೆಲೆ ಹೋಗಲಿಕ್ಕೆ ಕಾರಣವೇನು?" ಭೀಮರಾಯನು ಕೇಳಿದನು.

"ರಂಗಣ್ಣನು ರಾಮನನ್ನು ಕರೆದೊಯ್ಯಲಿಕ್ಕೆಂದು ಈ ಮನೆಗೆ ಬಂದಿದ್ದನು. ನಾವು ವಿಚಾರಿಸಲಾಗಿ, ಮೈಯಲ್ಲಿ ಸ್ವಾಸ್ಥ್ಯವಿಲ್ಲೆಂದು ನುಡಿದನು."

ಈ ಸಮಯದಲ್ಲಿ ಸುಭದ್ರೆಯು ಅಲ್ಲಿ ಕಾಣಿಸಿಕೊಂಡಳು. ಭೀಮರಾಯನು ಹೆಂಡತಿಯನ್ನುದ್ದೇಶಿಸಿ ಮಾತಾಡಹತ್ತಿದನು: "ಮೈಯಲ್ಲಿ ಸ್ವಾಸ್ಥ್ಯವಿಲ್ಲದಿರುವುದು ಸ್ವಾಭಾವಿಕವಾದದ್ದು, ಆದರೆ ಆ ಜಾಡ್ಯವನ್ನು ಕಳೆದುಕೊಳ್ಳುವ ಮಾರ್ಗವಿದಲ್ಲ." ಭೀಮರಾಯನು ಇನ್ನೂ ಮಾತಾಡತಕ್ಕವನಿದ್ದನು; ಆದರೆ ಬಳಿಯಲ್ಲಿ ಸುಶೀಲೆಯಿರುವುದನ್ನು ಜ್ಞಾಪಕಕ್ಕೆ ತಂದುಕೊಂಡ ಇವನು ಮುಂದೆ ಮಾತಾಡಲಿಲ್ಲ.

---

## ೧೨

ಬೇರೆ ವಕೀಲರು ದಿನಗಳನ್ನು ಕಳೆಯ ಹತ್ತಿರುವಂತೆ ಭೀಮರಾಯನ ದಿನಗಳೂ ಕ್ರಮಿಸುತ್ತಿದ್ದುವು. ಇವನು ಹಣದ ಅಡಚಣಿಯಾಗುತ್ತಲೆ ಪ್ರಾಚೀನರ ರೀತಿ-ನೀತಿಗಳ ಪಕ್ಷಪಾತಿಯಾಗುತ್ತಿದ್ದನು; ಹಿಂದೂಧರ್ಮದ ಉಚ್ಚ ತತ್ವಗಳ ಹಾಗು ಆಚಾರ-ವ್ಯವಹಾರಗಳ ಪ್ರಶಂಸೆ ಮಾಡುತ್ತಿದ್ದನು. ಸಾಕಷ್ಟು ಧನವು ಕೈಸೇರಿತೆಂದರೆ, ಸುಮ್ಮನಾಗಿ ಬಿಡುತ್ತಿದ್ದನು. ಇವನು ಬಾಯಿಯಿಂದ ಏನೆ ಮಾತಾಡಲಿ, ಆಚರಣೆಯಲ್ಲಿ ಸ್ಥಿತ್ಯಂತರವನ್ನು ತೋರ್ಪಡಿಸುತ್ತಿದ್ದಿಲ್ಲ. ಇವನು ರಂಗರಾಯನ ನಿಜವಾದ ಹಿತಚಿಂತಕನು; ರಂಗರಾಯನ ಸ್ವಭಾವವನ್ನರಿತವನು. ದುರ್ಬಲಚಿತ್ತನಾದ ರಂಗರಾಯನನ್ನು ಬೇಕಾದ ಕೆಲಸಕ್ಕೆ ಹುರಿಗೊಳಿಸಬಹುದೆಂದು ಬಗೆದಿದ್ದ ಇವನು ಮಧ್ವರಾಯನಿಗೆ ನಿರಾಶೆಯ ಉತ್ತರವನ್ನು ಹೇಳಲಿಲ್ಲ

ವಿಷ್ಟೇ ಅಲ್ಲ; ರಂಗರಾಯನು ಬರುವುದೊಂದೇ ತಡ, ಕೂಡಲೆ ಲಗ್ನವಾಗುವಂತೆ ಮಾಡಿಕೊಡುವೆನು; ಎಂದು ಆಶಿದೋರುತ್ತ ನಡೆದಿದ್ದನು.

ಭೀಮರಾಯನು ಭಾಮಿನಿಯ ಹಿತಚಿಂತಕನೂ ಅಹುದು; ಆದರೆ ಭಾಮಿನಿಯ ಆಚಾರ-ವಿಚಾರಗಳ ವಿಷಯದಲ್ಲಿದ್ದ ಆ ಶ್ರದ್ಧೆಯು ಈಗ ಇವನಲ್ಲಿ ಉಳಿದಿರಲಿಲ್ಲ. ಇವನು ಭಾಮಿನಿಗೆ ಕೆಡಕು ಆಗಬೇಕೆಂದು ಎಂದೂ ಅಪೇಕ್ಷಿಸಿದವನಲ್ಲ; ಆದರೆ ಭಾಮಿನಿಯು ಇನ್ನು ಪತಿಗೃಹವನ್ನು ಸೇರಿ ಉಪಯೋಗವಿಲ್ಲವೆಂದು ಬಗೆದವನಾಗಿದ್ದನು. ಅವಳು ಎಲ್ಲಿ ಇರುವಳೋ ಅಲ್ಲಿಯೇ ಇರಲಿ; ನಿರಾಪದಳಾಗಲಿ; ಧರ್ಮಾಚರಣೆಯ ಮಾರ್ಗದಲ್ಲಿ ಉತ್ತರೋತ್ತರ ಉನ್ನತಿಯನ್ನು ಹೊಂದಲಿ; ಆದರೆ ರಂಗರಾಯನ ಮನೆಯಲ್ಲಿ ಬಂದು ಉತ್ಪಾತವೆಬ್ಬಿಸುವದು ಬೇಡ, ಎಂದು ಅನ್ನುತ್ತಿದ್ದನು. ಇವನು ಈ ವಿಷಯದಲ್ಲಿ ಇಂತು ಭಾವಿಸುತ್ತಿದ್ದನು: "ಭಾಮಿನಿಯು ಪ್ರೇಮಮಯಿಯಳಲ್ಲ. ದಿವ್ಯಪ್ರೇಮದಿಂದ ಪತಿಯನ್ನು ಪ್ರೀತಿಸಿದವಳಲ್ಲ. ಅವಳು ಆಚಾರ್ಯರ ಮನೆಯಲ್ಲಿ ಬೆಳೆದವಳು. ತಾಯಿ-ತಂದೆಗಳ ನಿಷ್ಠುರ ಆಚರಣೆಯಲ್ಲಿ ದೊಡ್ಡವಳಾದವಳು. ವ್ರತೋಪವಾಸಗಳ ಹಾಗು ಮಡಿ-ಮೈಲಿಗೆಗಳ ಕಠೋರ ನಿಯಮಗಳನ್ನು ಪಾಲಿಸುತ್ತ ಬಂದವಳು. ಈ ಸ್ಥಿತಿಯಲ್ಲಿ ಬೆಳೆದು ದೊಡ್ಡವಳಾದ ಅವಳು ಧಾರ್ಮಿಕಳಾಗಬಹುದು; ಕರ್ತವ್ಯತತ್ಪರಳಾಗಬಹುದು; ಆದರೆ ಪ್ರೇಮಪೂರ್ಣಳಾಗಳು. ಅವಳು ಪತಿಯನ್ನು ಪ್ರೀತಿಸಿದ್ದು, ಅವನೊಡನೆ ಸರಳರೀತಿಯಿಂದ ವರ್ತಿಸಿದ್ದು ಕೇವಲ ಕರ್ತವ್ಯ ಪಾಲನೆಗಾಗಿ-ಧರ್ಮದ ಆಜ್ಞೆಗಳನ್ನು ಉಲ್ಲಂಘಿಸದಿರುವದಕ್ಕಾಗಿ ಅಂತೆಯೇ ಅವಳು ಪತಿಯ ಕಡೆಯಿಂದ ತನ್ನ ಧರ್ಮಾಚರಣೆಗೆ ಆಘಾತವಾಗಹತ್ತುತ್ತಲೆ, ಪತಿ ಸಹವಾಸವನ್ನು ಸಹಜ ರೀತಿಯಿಂದ ತ್ಯಾಗಮಾಡಿಬಿಟ್ಟಳು ಅವಳು ರಾಮನನ್ನು ಅಷ್ಟು ಬೇಗ ಪ್ರೀತಿಸಿದ್ದಾದರೂ ಕರ್ತವ್ಯಪಾಲನೆಗಾಗಿಯೆ. ಒಂದುವೇಳೆ ಅವಳು ನಿಜವಾಗಿಯೂ ರಾಮನನ್ನು ಪ್ರೀತಿಸಿದ್ದರೆ, ತೌರುಮನೆಗೆ ಹೊರಡುವಕ್ಕೆ ಹಿಂದೆಗೆಯುತ್ತಿದ್ದಿಲ್ಲವೆ? ಹೊರಡುವ ಮೊದಲು ರಾಮನನ್ನು ನೋಡಲಿಕ್ಕೆ-ಮಾತಾಡಿಸಲಿಕ್ಕೆ ಮನಸ್ಸು ಮಾಡುತ್ತಿದ್ದಿಲ್ಲವೆ?

ಹೀಗೆ ಎರಡು ತಿಂಗಳು ಕ್ರಮಿಸಿದವು. ಒಂದು ದಿನ ಮುಂಚಾಲೆಯಿಂದ ಭೀಮರಾಯನಿಗೆ ಒಂದು ಪತ್ರವು ಬಂತು ಭೀಮರಾಯನ ಗೆಳೆಯನೊಬ್ಬನು ಈ ಪತ್ರವನ್ನು ಬರೆದಿದ್ದನು. ಈ ಪತ್ರದ ಸಾರವಿಂತು:-"ರಂಗರಾಯನು ಗುರುವಿನಿಂದ ಮಂತ್ರವನ್ನು ಗ್ರಹಿಸಿದ್ದಾನೆ. ಮಗನ ಮುಂಜಿಯನ್ನು ಮಾಡಿ

ದ್ದಾನೆ. ತಂದೆ-ಮಕ್ಕಳಿಬ್ಬರೂ ದಿನಾಲು ನಸುಕಿನಲ್ಲಿಯೆ ಸ್ನಾನ ಮಾಡುವರು. ರಂಗರಾಯನು ಸಂಧ್ಯಾವಂದನೆಯ ತರುವಾಯ ಜಪಮಾಡುತ್ತ ಕುಳ್ಳಿರುವನು. ಆರುತಾಸು ಹೊತ್ತೇರಿದರೂ ಇವನ ಜಪವು ಮುಗಿಯುವದಿಲ್ಲ. ಜಪದ ತರುವಾಯ ದೇವಪೂಜೆಯನ್ನು ಮಾಡಿಕೊಂಡು ಒಂದು ಹೊತ್ತು ಮಾತ್ರ ಪ್ರಸಾದವನ್ನು ಸ್ವೀಕರಿಸುವನು. ರಾತ್ರಿಯಲ್ಲಿ ಬಹುಕಾಲ ಎಚ್ಚತ್ತಿದ್ದು ಭಜನೆಮಾಡುವನು. ರಾಮುನಿಗೆ ಮಂತ್ರಗಳನ್ನು ಕಲಿಸಲಿಕ್ಕೆ ಒಬ್ಬ ಗುರುವನ್ನು ನಿಯಮಿಸಿದ್ದಾನೆ."

ಭೀಮರಾಯನ ಮನೆಯಲ್ಲಿ ಈ ಸಂಗತಿಯ ಚರ್ಚೆ ನಡೆಯಿತು. ಸುಶೀಲೆಯು ಈ ಸುದ್ದಿಯನ್ನು ಕೇಳಿ ನಗಹತ್ತಿದಳು. ಸುಭದ್ರೆಯು: "ಈ ಪತ್ರವನ್ನು ನಿಮ್ಮ ಗೆಳೆಯನು ಬರೆದಿರುವನಷ್ಟೆ? ಅವನು ಹುಡುಗಾಟ ಮಾಡಿ, ನಿಮ್ಮನ್ನು ಬೆರಗುಗೊಳಿಸಲಿಕ್ಕೆ ಇಚ್ಛಿಸಿ, ಹೀಗೆ ಪತ್ರಬರೆದಿರಬಹುದು," ಎಂದು ನುಡಿದಳು.

"ಅವನು ನನ್ನ ಗೆಳೆಯನಾದರೂ ಹುಡುಗಾಟಿಕೆಯ ಸ್ವಭಾವದವನಲ್ಲ—ನನ್ನೊಡನೆ ಚೇಷ್ಟೆ ಮಾಡತಕ್ಕವನಲ್ಲ." ಭೀಮರಾಯನು ಹೇಳಿದನು.

"ಅವನು ನಿಮ್ಮ ಗೆಳೆಯನೆಂದ ಬಳಿಕ ಅಣ್ಣನ ಸ್ನೇಹಿತನೂ ಆಗಿರಬೇಕು. ಅವನು ಅಣ್ಣನ ಮುಖದಿಂದ ಭಾಮಿನಿಯ ಹಾಗು ನಿಮ್ಮ ಸಂಗತಿಯನ್ನು ಕೇಳಿಕೊಂಡಿರಬಹುದು. ನೀವು ಭಾಮಿನಿಯ ಆಚಾರ-ವಿಚಾರಗಳ ಪರಮಭಕ್ತರಾಗಿದ್ದುದನ್ನು ಅರಿತಿರಬಹುದು. ಅವನು ನಿಮ್ಮೊಡನೆ ವಿನೋದ ಮಾಡಲು ಬಯಸಿ ಹೀಗೆ ಪತ್ರವನ್ನು ಬರೆದಿರಬಹುದು" ಸುಭದ್ರೆಯು ನಸುನಗುತ್ತ ಮತ್ತೆ ಮಾತಾಡಹತ್ತಿದಳು:"ನಿಮಗೆ ಪತ್ರದ ಇಂಗಿತವು ಹೊಳೆಯದಾಯಿತಲ್ಲವೆ? ಕೇವಲ ಪುಸ್ತಕಗಳನ್ನು ಪಾಠಮಾಡಿ ಪರೀಕ್ಷೆಗೊಟ್ಟು ಪದವಿಗಳನ್ನು ಪಡೆದಿದ್ದರೇನಾಯಿತು? ಮೇಲ್ಬುದ್ಧಿಯು ಬೇಕೇಬೇಕು! ಇನ್ನು ನೀವು ನಿಮ್ಮ ಖಟ್ಲೆಗಳಲ್ಲಿ ನಿಮ್ಮಂತೆಯೆ ತೀರ್ಮಾನವಾಗಬೇಕೆಂಬ ಇಚ್ಛೆಯಿದ್ದರೆ, ನನ್ನ ಮತವನ್ನು ತಕ್ಕೊಳ್ಳುತ್ತ ಹೋಗಿರಿ. ನನ್ನ ಮತದಂತೆ ನೀವು ಖಟ್ಲೆಯನ್ನು ನಡಿಸಹತ್ತಿದರೆ ಗೆಲಿಯುವಿರಿ, ಹೇರಳ ಹಣವನ್ನು ಸಂಪಾದಿಸುವಿರಿ, ಪಕ್ಷಕಾರರನ್ನೂ ಸಂತೋಷಗೊಳಿಸುವಿರಿ." ಬಳಿಕ ಸುಭದ್ರೆಯು ಸುಶೀಲೆಯನ್ನುದ್ದೇಶಿಸಿ:"ಇನ್ನು ನೀನು ಇಲ್ಲಿ ನಿಲ್ಲಬೇಡ. ಬೇಗನೆ ನಿನ್ನ ಕೆಲಸವನ್ನು ತೀರಿಸಿಕೊಳ್ಳು. ಶಕುಂತಲೆಯ ನಿಮಂತ್ರಣವನ್ನು ಸ್ವೀಕರಿಸಿದ್ದ ನಾವು, ನಿಯಮಿತ ವೇಳೆಗೆ ಅವಳ ಮನೆಗೆ ಹೋಗಲಿಕ್ಕೆ ಬೇಕು," ಎಂದು ನುಡಿದಳು.

ಸುಶೀಲೆಯು ನಗುತ್ತ ಒಳಗೆ ಹೋದಳು. ಸುಭದ್ರೆಯು ಪತ್ರದ ಇಂಗಿತವನ್ನು ಸರಿಯಾಗಿ ಹೊರಗೆಡವಿದಳೆಂದು ಸುಶೀಲೆಯು ಭಾವಿಸಿದ್ದಳು.

ಮುಂದೆ ಐದಾರು ದಿನಗಳ ತರುವಾಯ ಒಂದು ದಿನ ಭೀಮರಾಯನು ಹೆಂಡತಿಯ ಮುಂದೆ ಒಂದು ಜಡವಾದ ಪತ್ರವನ್ನು ಚೆಲ್ಲಿಕೊಟ್ಟು ಇಂತು ಹೇಳಿದನು: "ಈ ಪತ್ರವನ್ನೋದಿಕೊಳ್ಳು. ನನ್ನ ಗೆಳೆಯನ ತಂದೆಯು ಈ ಪತ್ರವನ್ನು ಬರೆದಿದ್ದಾನೆ. ಪತ್ರಲೇಖಕನು ಪರಮ ಧಾರ್ಮಿಕನು. ಎಪ್ಪತ್ತು ವರುಷದ ಮುದುಕನು. ನನ್ನನ್ನು ನೋಡಿದವನಲ್ಲ. ಇಂಥವನು ನನ್ನೊಡನೆ ಹುಡುಗಾಟಮಾಡುವ ಸಂಭವವಿದೆಯೆ?"

ಪತ್ರವು ಬಹು ದೊಡ್ಡದು. ಕನ್ನಡದಲ್ಲಿ ಬರೆಯಲ್ಪಟ್ಟಿತ್ತು. ಸುಭದ್ರೆಯು ಎರಡು ಸಲ ಪತ್ರವನ್ನೋದಿಕೊಂಡಳು. ಅವಳ ಮುಖದ ಮೇಲೆ ವಿಷಾದದ ಛಾಯೆಯು ಘನೀಭವಿಸುವದರಲ್ಲಿತ್ತು. ಅವಳು "ಈ ಸಂಗತಿಯು ನಿಜವಿರಬಹುದೇನು? ಏನೆ ಇರಲಿ, ನೀವು ಒಮ್ಮೆ ಅಲ್ಲಿಗೆ ಹೋಗಿ ನಿಜ ಸಂಗತಿಯನ್ನು ನೋಡಿಕೊಂಡು ಬರಲಿಕ್ಕೆ ಬೇಕು!" ಎಂದು ಅಂದಳು.

"ನಾನು ಹೇಗೆ ಹೋಗಲಿ? ನನಗೆ ಕೊಂಚವೂ ಅವಕಾಶವಿಲ್ಲದಾಗಿದೆ."

"ಹೀಗೆಂದರೆ ನಾನು ಕೇಳತಕ್ಕವಳಲ್ಲ! ಅಣ್ಣನ ಈ ವಿಪತ್ಪ್ರಸಂಗದಲ್ಲಿ ಅವನಿಗೆ ನಾವು ಸಹಾಯ ಮಾಡದಿದ್ದರೆ, ಮತ್ತಾರು ಸಹಾಯಕರಾಗಬೇಕು? ಈ ಪತ್ರದಲ್ಲಿಯ ಅರ್ಧಸಂಗತಿಯು ನಿಜವಿದ್ದರೂ, ಅಣ್ಣನು ಸಂಕಟಪರಂಪರೆಯಲ್ಲಿ ಸಿಕ್ಕಿರುವನೆಂಬುದು ನಿಶ್ಚಿತವಾದದ್ದು! ನೀವು ಈ ಸಂಕಟದಿಂದ ಅಣ್ಣನನ್ನು ರಕ್ಷಿಸಲಿಕ್ಕೆ ಬೇಕು!"

"ನೀನೆಂದದ್ದು ನಿಜ; ಆದರೆ ನಾನು ಅಲ್ಲಿಗೆ ಹೋಗುವದು ಹೇಗೆ? ಕಚೇರಿಯ ಕೆಲಸಗಳಲ್ಲಿ ನನಗೆ ಒಂದೆರಡು ದಿನಗಳ ಅವಕಾಶವು ಕೂಡ ದೊರೆಯದಾಗಿದೆ. ಒಂದುವೇಳೆ ಆ ಕೆಲಸಗಳನ್ನೆಲ್ಲ ಬದಿಗಿರಿಸಿ ಹೋದರೂ, ಕೃತಕಾರ್ಯನಾಗಿಯೆ ಬಿಡುವೆನೆಂಬುದರ ನಿಶ್ಚಯವಿಲ್ಲದಾಗಿದೆ, ಯಾಕೆಂದರೆ, ಈ ಪ್ರಸಂಗದಲ್ಲಿ ನಿನ್ನ ಅಣ್ಣನು ನನ್ನ ಮಾತನ್ನು ನಡಿಸುವನೊ-ಇಲ್ಲವೊ ಎಂಬುದನ್ನಾರು ಬಲ್ಲರು?"

ಇಬ್ಬರೂ ಕೆಲಹೊತ್ತು ಸುಮ್ಮನಿದ್ದರು. ಬಳಿಕ ಭೀಮರಾಯನು ನಿಟ್ಟುಸಿರಬಿಟ್ಟು ನುಡಿಯಹತ್ತಿದನು: "ದುರ್ಬಲ ಪ್ರಕೃತಿಯ ರಂಗನು ಪ್ರವೃತ್ತಿಯ ದಾಸನು. ಅವನಿಂದ ಇಂತಹ ಕೆಲಸವಾದೀತು-ಇಲ್ಲವೆ ಆಗಲಿಕ್ಕಿಲ್ಲವೆಂದು

ಹೇಳಲಿಕ್ಕೆ ಒರುವಂತಿಲ್ಲ. ಅವನು ಯಾವ ಕೆಲಸವನ್ನೂ ಮಾಡಲಿಕ್ಕಿಲ್ಲ; ಅಥವಾ ಎಲ್ಲ ಕೆಲಸಗಳನ್ನೂ ಮಾಡುವನು! ಆ ಚಂಚಲ ಚಿತ್ತನು ಏನೆ ಮಾಡಲಿ; ಹಾಳಾಗಿ ಹೋಗಲಿ! ನಾನು ವಿಶೇಷ ದುಃಖಗೊಳ್ಳುವದಿಲ್ಲ ಅವನು ತನ್ನೊ ಡನೆ ಹುಡುಗನನ್ನು ಕೆಡಿಸುತ್ತಿರುವುದಕ್ಕಾಗಿ ನನಗೆ ಬಹಳ ದುಃಖವಾಗುತ್ತದೆ! ನಾವು ಈಗಳೇ ಅವನನ್ನು ಈ ಪ್ರವೃತ್ತಿಯಿಂದ ತಡೆಯಲಿಕ್ಕೆ ಬೇಕು!''

ಸುಭದ್ರೆಯು ಮನಸ್ಸಿನ ವಿಷಾದಾತಿರೇಕದಿಂದ ಗಂಭೀರಮುಖಿಯಾಗಿ ಸುಮ್ಮನೆ ಕುಳಿತಿದ್ದಳು. ಭೀಮರಾಯನು ಕೆಲ ಸಮಯದ ವರೆಗೆ ಸ್ತಬ್ಧನಾ ಗಿದ್ದು ಮತ್ತೆ ಮಾತಾಡಹತ್ತಿದನು: "ಇಂತಹದೊಂದು ದುರ್ಘಟನೆಯು ಘಟಿ ಸುವುದೆಂದು ನಾನು ಮೊದಲೇ ತರ್ಕಿಸಿದ್ದೆನು; ಯಾಕೆಂದರೆ, ರಂಗನು ಭಾಮಿ ನಿಯನ್ನು ನಿಜವಾಗಿಯೂ ಪ್ರೀತಿಸುತ್ತಿದ್ದನು. ಅವನು ರಾಮನ ತಾಯಿಯನ್ನು ಇಷ್ಟೊಂದು ಪ್ರೀತಿಸಿದವನಲ್ಲ. ಈಗ ನಡೆದಿರುವುದು ಆ ಉದಾತ್ತ ಪ್ರೇಮದ ಪ್ರತಿಕ್ರಿಯೆಯು''

ಸುಭದ್ರೆಯು ಕೋಪದಿಂದ ಹೀಗೆ ನುಡಿದಳು: "ಅಣ್ಣನು ಈ ಮಾರ್ಗ ದಿಂದ ಭಾಮಿನಿಯ ಮನವೊಲಿಸಬೇಕೆಂದಿರುವನೆ? ನಾನಿದನ್ನು ನಂಬಲಾರೆನು! ನನ್ನ ಅಣ್ಣನು ದುರ್ಬಲ ಪ್ರಕೃತಿಯವನಾಗಿರಬಹುದು; ಆದರೆ ಹೀನವೃತ್ತಿಯವ ನೆಂದೂ ಆಗಲಾರನು! ಯಾರ ಸಲುವಾಗಿಯೂ ಅವನು ಇಂತಹ ನಟನೆಯನ್ನು ನಟಿಸ ಬಯಸುವುದು ಸಂಭವವಲ್ಲ!''

ಪ್ರೇಮದ ಪ್ರತಿಕ್ರಿಯೆಯು ಎಂತಹ ಅದ್ಭುತ ವ್ಯಾಪಾರವೆಂಬುದನ್ನು ಸುಭದ್ರೆಯು ಅರಿಯಳು. ಭೀಮರಾಯನಾದರೂ ಈ ಶಬ್ದವನ್ನು ಪುಸ್ತಕದಲ್ಲಿ ಓದಿಕೊಂಡಿದ್ದನೆ ಹೊರತು, ಅನುಭವದಿಂದ ಅರಿತುಕೊಂಡವನಲ್ಲ. ಕಾರಣ ಇವನು ಹೆಂಡತಿಯ ಕುಪಿತ ವಚನಗಳಿಗೆ ಉತ್ತರ ಕೊಡಬಯಿಸಲಿಲ್ಲ; ತನಗೆ ಗೊತ್ತಿರದ ವಿಷಯದಲ್ಲಿ ವಾಗ್ಯುದ್ಧವನ್ನು ನಡಿಸಲಿಕ್ಕೆ ಸಾಹಸಗೊಳ್ಳಲಿಲ್ಲ

ಪ್ರತಿಕ್ರಿಯೆಯ ಶಬ್ದದ ಅರ್ಥವು ಏನೇ ಇರಲಿ, ಪರಿಣಾಮವು ಹೇಗೇ ಆಗಲಿ, ಸುಭದ್ರೆಯು ತನ್ನ ಹಟವನ್ನು ಸಾಧಿಸಿಕೊಂಡಳು. ಭೀಮರಾಯನು ತನ್ನ ಕೆಲಸಗಳನ್ನು ಬದಿಗಿರಿಸಿ ಒಂದೆರಡು ದಿನಗಳಲ್ಲಿಯೆ ಮಂಚಾಲೆಗೆ ಹೊರಡ ಬೇಕಾಯಿತು ಇವನು ಮಂಚಾಲೆಯಿಂದ ಮರಳಿ ಬಂದು ವಿವರಿಸಿದ ಸಂಗ ತಿಯು ಹಾಸ್ಯಾಸ್ಪದವಾಗಿರುವಂತೆ ಅಪ್ರಿಯವೂ ಆಗಿತ್ತು. ಭೀಮರಾಯನು ಹೆಂಡತಿಗೆ ಹೇಳಹತ್ತಿದನು: "ರಂಗನ ದರ್ಶನವಾಗಲಿಲ್ಲ. ಅವನು ದೇವದರ್ಶ

ಕ್ಕೆಂದು ಗುರುವಿನೊಡನೆ ತಿರುಪತಿಗೆ ಹೋಗಿದ್ದನು. ನಾನು ರಾಮುನನ್ನು ಯಾತ್ರ ನೋಡಿದೆನು. ಅವನು ಬ್ರಹ್ಮಚಾರಿಯ ವೇಷದಿಂದಿದ್ದನು ಶಾಲೆಗೆ ಹೋಗುವುದನ್ನು ಬಿಟ್ಟುಕೊಟ್ಟು ಆಚಾರ್ಯರ ಬಳಿಯಲ್ಲಿ ಸಂಸ್ಕೃತವನ್ನು ಕಲಿಯುತ್ತಿರುವನಂತೆ. ಸ್ನಾನ-ಸಂಧ್ಯಾದಿಗಳು ಯಥಾಕ್ರಮವಾಗಿ ಸಾಗಿರುವವಂತೆ'' ಭೀಮರಾಯನು ತುಸ ಹೊತ್ತು ಸುಮ್ಮನಿದ್ದು ಮತ್ತೆ ಹೇಳತೊಡಗಿದನು: "ರಾಮುನು ನನ್ನನ್ನು ನೋಡುತ್ತಲೆ ಕಣ್ಣಲ್ಲಿ ನೀರು ತಂದನು. ನನಗೆ ಬಹಳ ಕೆಡಕೆನಿಸಿತು. ಅವನ ಮುಖ ಲಕ್ಷಣವನ್ನು ನೋಡುತ್ತಿರಲು ಅವನಿಗೆ ಆಹಾರದ ಕಷ್ಟವು ಅತಿಶಯವಾಗಿದೆಯೆಂದು ನನಗೆ ಅನಿಸಿತು''

ಸುಭದ್ರೆಯು ರಾಮುನನ್ನು ಪ್ರೀತಿಸಿದ್ದಳು. ಈ ಪ್ರೇಮವು ಅಷ್ಟೊಂದು ಉದಾತ್ತವಾಗಿರದಿದ್ದರೂ, ಅಳಿಯನು ದೂರ ದೇಶದಲ್ಲಿ ಆಹಾರವಿಲ್ಲದೆ ಬಳಲುತ್ತಿರುವನೆಂಬದನ್ನು ಕೇಳಿ ಸಹಿಸದವಳಾಗಿದ್ದಳು. ಇವಳು ಕಣ್ತುಂಬ ನೀರು ತಂದು: "ನೀವು ಅವನನ್ನು ನಿಮ್ಮ ಸಂಗಡ ಕರೆತರಲಿಲ್ಲವೇಕೆ?" ಎಂದು ಕೇಳಿದಳು.

"ಕರೆತರಬೇಕೆಂಬ ಇಚ್ಛೆಯು ನನಗೂ ಆಗಿತ್ತು; ಆದರೆ ಪರಿಣಾಮವು ಒಳಿತಾಗಲಿಕ್ಕಿಲ್ಲೆಂದು ಭಾವಿಸಿ ಬಿಟ್ಟು ಬಂದೆನು. ಎಲ್ಲ ಆಕರ್ಷಣ ಶಕ್ತಿಗಳಲ್ಲಿ ಧರ್ಮಾಕರ್ಷಣವು ಹೆಚ್ಚು ಬಲವತ್ತರವಾದ್ದು! ನಾನು ಈಗ ರಾಮುನನ್ನು ಕರೆತಂದಿದ್ದರೆ, ರಂಗನು ನಮ್ಮ ಮೇಲೆ ವಿಶೇಷ ಕೋಪಗೊಳ್ಳುತ್ತಿದ್ದನು.''

ಸುಭದ್ರೆಯು ಕಣ್ಣುಗಳನ್ನೊರಸಿಕೊಳ್ಳುತ್ತ: "ನಾನೂ ನಿಮ್ಮ ಸಂಗಡ ಬಂದಿದ್ದರೆ ನೆಟ್ಟಗಾಗುತ್ತಿತ್ತು'' ಎಂದು ನುಡಿದಳು.



# ೧೮

ರಂಗರಾಯನು ಪತ್ರ ಬರೆಯುವದನ್ನು ಬಿಟ್ಟುಕೊಟ್ಟಿದ್ದನು. ಆದರೂ ಆತ್ಮೀಯರೂ, ಬಂಧು-ಬಾಂಧವರೂ, ಗೆಳೆಯರೂ ರಂಗರಾಯನ ಮಾತೆತ್ತಿ ಚರ್ಚಿಸಹತ್ತಿದರು. ಕೆಲವರು ರಂಗರಾಯನ ಅದ್ಭುತ ಸಾಧನೆಯ ಮಹತಿಯನ್ನು ವಿವರಿಸಿ, ರಂಗರಾಯನನ್ನು ಸ್ತುತಿಸುತ್ತಿದ್ದರು; ಬೇರೆ ಹಲವರು ಕುತ್ಸಿತ ಮಾತುಗಳನ್ನೆತ್ತಿ ರಂಗರಾಯನ ಉಪಹಾಸಮಾಡುತ್ತಿದ್ದರು. ರಂಗರಾಯನ ಈ ಕೀರ್ತಿಕಥೆಯು ಮಧ್ವರಾಯನ ಮನೆಗೆ ಮುಟ್ಟಲಿಕ್ಕೆ ವಿಲಂಬವಾಗಲಿಲ್ಲ. ಸುಭದ್ರೆಯು ನಾಚುಗೆಯಿಂದ ಸಮಾಜದಲ್ಲಿ ಮೋರೆದೋರದಾದಳು. ಆಗಾಗ್ಗೆ ಪತಿಯ ಬಳಿಯಲ್ಲಿ ಮಾತ್ರ: "ಅಣ್ಣನು ಇಲ್ಲಿಗೆ ಒಮ್ಮೆ ಬಂದಾದರೂ ಬರಲಿ, ಇಲ್ಲಿ ಅವನ ಹುಚ್ಚುಚ್ಚಾರವನ್ನು ನಾನೆಷ್ಟು ಮಾತ್ರಕ್ಕೂ ನಡೆಯಗೊಡೆನು!" ಎಂದು ಬೆಡಗಿನಿಂದ ನುಡಿಯುತ್ತಿದ್ದಳು. ಭೀಮರಾಯನು ಈ ಮಾತಿಗೆ ಉತ್ತರ ಕೊಡುತ್ತಿದ್ದಿಲ್ಲ. ಯಾಕೆಂದರೆ, ತನ್ನ ಹೆಂಡತಿಯಿಂದ ಯಾವ ಕಾರ್ಯವೂ ಆಗದೆಂದು ಇವನು ತಿಳಿದಿದ್ದನು; ಆದರೆ ಭೀಮರಾಯನು ಸಮಾಜದ ಸಮವೇತ ಶಕ್ತಿಯ ವಿಷಯದಲ್ಲಿ ನಂಬುಗೆಯುಳ್ಳವನಾಗಿದ್ದನು. ಬಹು ಜನರು ಕೂಡಿ ಒತ್ತಾಯ ಪಡಿಸಹತ್ತಿದರೆ, ದುರ್ಬಲ ಪ್ರಕೃತಿಯ ರಂಗರಾಯನು ಹಾದಿಗೆ ಬಾರದಿರನೆಂದು ಭಾವಿಸಿದ್ದನು.

ರಂಗರಾಯನು ಮತ್ತೆ ನಾಲ್ಕು ತಿಂಗಳ ರಜೆಯನ್ನು ತಕ್ಕೊಂಡಿದ್ದನು. ಒಟ್ಟು ರಜೆಯ ಅವಧಿಯು ಮುಗಿಯುವುದಕ್ಕೆ ಇನ್ನು ಎರಡು ತಿಂಗಳ ಅವಕಾಶವಿತ್ತು. ರಂಗರಾಯನು ನವಕರಿಯನ್ನು ಬಿಡನೆಂಬ ವಿಷಯದಲ್ಲಿ ಭೀಮರಾಯನು ನಿಶ್ಚಿಂತನಾಗಿದ್ದನು; ಯಾಕೆಂದರೆ ರಂಗರಾಯನ ಗುರುವು ರಂಗರಾಯನಿಗೆ ಯಾವುದೇ ಮಂತ್ರದ ಉಪದೇಶ ಮಾಡಲಿ, ನವಕರಿ ಬಿಡು ಎಂಬ ಮಂತ್ರದ ಉಪದೇಶ ಮಾಡನೆಂಬದನ್ನು ಇವನು ನಿರ್ಧರಿಸಿದ್ದನು.

ಇಂದಿನ ಚಹಾಪಾನದ ಸಮಯದಲ್ಲಿ ಭೀಮರಾಯನು ಹೆಂಡತಿಯನ್ನು ಉದ್ದೇಶಿಸಿ ಮಾತಾಡಹತ್ತಿದನು: "ಇನ್ನು ಭಾಮಿನಿಯು ಇಲ್ಲಿಗೆ ಬಂದರೆ, ಅವಸರದಿಂದ ತಮ್ಮನನ್ನು ಕರಿಸಿಕೊಂಡು ತೌರುಮನೆಗೆ ಹೋಗುವ ಪ್ರಸಂಗ ಬಾರದು.

ಸತಿ-ಪತಿಗಳಿಬ್ಬರೂ ಜಪ-ತಪಗಳಲ್ಲಿ ತೊಡಗಿ, ಸ್ವಚ್ಛಂದದಿಂದ ಕಾಲಕಳೆಯುವರು.''

ಬಾಡಿದ ಮೋರೆಯಿಂದ ಸುಭದ್ರೆಯು: "ಭಾಮಿನಿಯು ಮತ್ತೆ ಬರತಕ್ಕವಳಿರುವಳೆಂಬ ಸುದ್ದಿಯನ್ನು ನೀವು ಕೇಳುವಿರೇನು?" ಎಂದು ಕೇಳಿದಳು.

"ಇಲ್ಲ.''

ಸುಭದ್ರೆಯು ಕ್ಷಣಕಾಲ ಸುಮ್ಮನಿದ್ದು ಬಳಿಕ ಮೆಲ್ಲನೆ ಮಾತಾಡಲುಪಕ್ರಮಿಸಿದಳು: "ಹಳ್ಳಿಗಳಲ್ಲಿ ಮದ್ದು-ಮಾಟಗಳ ಗೊಂದಲವು ಬಹಳವಿರುವದಂತೆ. ನೀವು ಮದ್ದು-ಮಾಟಗಳನ್ನು ನಂಬುತ್ತಿರುವಿರಾ?''

"ನಾನು ನಂಬುವದಿಲ್ಲ. ಒಂದುವೇಳೆ ಮದ್ದು ಮಾಟಗಳಿದ್ದರೂ, ಭಾಮಿನಿಯು ಇವುಗಳ ಉಪಯೋಗ ಮಾಡಿಕೊಳ್ಳತಕ್ಕವಳಲ್ಲ.'' ಭೀಮರಾಯನು ನಕ್ಕು ನುಡಿದನು.

"ಯಾಕೆ ಮಾಡಿಕೊಳ್ಳಲಾರಳು?''

"ಭಾಮಿನಿಯ ವಿಷಯದಲ್ಲಿ ನಾನು ಸಂತುಷ್ಟನಲ್ಲ. ಅವಳ ಮೇಲಿದ್ದ ಮುನ್ನಿನ ಶ್ರದ್ಧೆಯೂ ಈಗ ನನ್ನಲ್ಲಿ ಉಳಿದಿಲ್ಲ, ಆದರೂ ಇಂತಹ ಹೀನಕಾರ್ಯಗಳನ್ನು ಅವಳಿಂದೂ ಆಚರಿಸಲೆಂದು ನಾನು ಆಣೆ ಮಾಡಿ ಹೇಳಬಲ್ಲೆನು.''

ಸುಭದ್ರೆಯು ಪತಿಯ ಈ ಮಾತನ್ನು ನಂಬಲಿಲ್ಲ. ಅವಳು ಈ ವಿಷಯದಲ್ಲಿ ಮಾತು ಬಳಿಸಲಾರದವಳಾಗಿ: "ಏನೇ ಆಗಲಿ, ರಾಮುನನ್ನು ಹೇಗಾದರೂ ಮಾಡಿ ಇಲ್ಲಿಗೆ ಕರೆತರಲಿಕ್ಕೆ ಬೇಕು,' ಎಂದು ನುಡಿದು ಸುಮ್ಮನಾದಳು.

ಈ ಸಮಯದಲ್ಲಿ ಈ ದಂಪತಿಗಳು ರಂಗರಾಯನ ಸೇವಕನು ಪಿಯಾನೊ ಪೆಟ್ಟಿಗೆಯನ್ನು ಬೇಡಬಂದಿರುವ ಸುದ್ದಿಯನ್ನು ಕೇಳಿದರು. ವಿಸ್ಮಿತರಾಗಿ ಆ ಸೇವಕನ ಹತ್ತಿರ ಹೋದರು. "ಪಿಯಾನೊ ಪೆಟ್ಟಿಗೆ ಯಾತಕ್ಕೆ ಬೇಕು?''ಎಂದು ಭೀಮರಾಯನು ಆ ಸೇವಕನನ್ನು ಕೇಳಿದನು.

"ಮನೆಗೆ ಮೂವರು-ನಾಲ್ವರು ಹೊಸಬರು ಬಂದಿದ್ದಾರೆ. ಇಂದು ಮನೆಯಲ್ಲಿ ಗಾಯನ-ವಾದನಗಳು ನಡೆಯುತಕ್ಕವಿವೆ'' ಆ ಸೇವಕನು ಹೇಳಿದನು.

'ಅಣ್ಣನು ಬಂದಿರುವನೆ?'ಸುಭದ್ರೆಯು ಕೌತುಕಾತಿಶಯದಿಂದ ಕೇಳಿದಳು.

"ರಂಗರಾಯರು ಬಂದಿರುವರೆ?'' ಭೀಮರಾಯನು ಕೇಳಿದನು.

"ಎಲ್ಲರೂ ನಿನ್ನಿನ ರಾತ್ರಿಯಲ್ಲಿ ಬಂದರು'' ಸೇವಕನು ಹೇಳಿದನು.

ಹಾಗು ಪಿಯಾನೊ ಪೆಟ್ಟಿಗೆಯನ್ನು ತರ್ಕೊಂಡು ತಿರುಗಿ ಹೋದನು. ದಂಪತಿಗಳು ಕೆಲಹೊತ್ತು ನೀರವವಾಗಿ ನಿಂತುಬಿಟ್ಟರು.

ಮರುದಿನ ಮುಂಜಾವಿನಲ್ಲಿ ಭೀಮರಾಯನು ಹೆಂಡತಿಯನ್ನೂ, ತಂಗಿಯನ್ನೂ ಸಂಗಡ ಕರಕೊಂಡು ರಂಗನ ಮನೆಗೆ ಹೋದನು. ಲಾಯಬ್ರರಿಯ ಕೋಣೆಯ ಬಾಗಿಲಲ್ಲಿ ನಿಂತು ಒಳಗೆ ನೋಡಿದನು. ರಂಗರಾಯನಿರಲಿಲ್ಲ. ಮೊದಲಿನ ಖುರ್ಚಿ-ಮೇಜು-ಕಪಾಟುಗಳಿರಲಿಲ್ಲ. ನೆಲದ ಮೇಲೆ ಕಂಬಳಿಗಳು ಹಾಸಲ್ಪಟ್ಟಿದ್ದುವು. ಮೇಲೆ ಜಾಜಮು ಹಾಸಲ್ಪಟ್ಟಿತ್ತು. ಭೀಮಸೇನನಂತಿರುವ ಇಬ್ಬರು ಬ್ರಾಹ್ಮಣರು ದಿಂಬುಗಳಿಗೆ ಆವಿತುಕೊಂಡು ಸ್ವಚ್ಛಂದದಿಂದ ಕುಳಿತಿದ್ದು, ಎಲೆ-ಅಡಿಕೆ-ತಂಬಾಕುಗಳ ಹೋಳಿಯನ್ನು ನಡಿಸಿದ್ದರು. ಮನಬಂದಂತೆ ಹರಟೆಯನ್ನು ಸಾಗಿಸಿದ್ದರು. ಇವರು ಎದುರಿನಲ್ಲಿ ಸಾಹೇಬ-ಮೇಮಸಾಹೇಬರು ಬರುತ್ತಿರುವದನ್ನು ನೋಡಿ ಗಾಬರಿಯಿಂದ ಎದ್ದು ನಿಂತರು. ಭೀಮರಾಯನು ಇವರ ವಿಶ್ರಾಂತಿಗೆ ವ್ಯಾಘಾತವನ್ನುಂಟುಮಾಡಲಿಕ್ಕೆ ಇಚ್ಛಿಸಲಿಲ್ಲ. ಆ ಕೋಣೆಯಲ್ಲಿ ಹೋಗದೆ, ಅಂತಸ್ತಿನ ಮೇಲೆ ಏರಿ ಹೋಗಹತ್ತಿದನು. ಸುಭದ್ರೆಯೂ, ಸುಶೀಲೆಯೂ ಭೀಮರಾಯನನ್ನು ಹಿಂಬಾಲಿಸಿ ನಡೆದರು.

ಸೇವಕನು ಭೀಮರಾಯನನ್ನು ಮುಂದೆ ಹೋಗಗೊಡಲಿಲ್ಲ ಸಾಹೇಬರು ಗುರುವಿನ ಸನ್ನಿಧಾನದಲ್ಲಿರುವರೆಂದೂ, ಮೇಲೆ ಯಾರನ್ನೂ ಬಿಡಕೂಡದೆಂದು ಅಪ್ಪಣೆ ಮಾಡಿರುವರೆಂದೂ ವಿನಯದಿಂದ ನುಡಿದನು. ಭೀಮರಾಯನು ಅಲ್ಲಿಯೆ ನಿಂತು: 'ರಂಗ, ರಂಗ' ಎಂದು ಗಟ್ಟಿಯಾಗಿ ಕೂಗಹತ್ತಿದನು; ಆದರೆ ರಂಗರಾಯನು ಬರಲಿಲ್ಲ-ರಾಮನು ಓಡಿಬಂದನು. ಅವನ ಇರವನ್ನೂ ವೇಷವನ್ನೂ ನೋಡಿ, ಸುಭದ್ರೆಯು ಕಣ್ಣೀರು ತಡೆಯದಾದಳು. ಬರಿಮೈಯಿಂದಿದ್ದ ರಾಮನು ಕೇವಲ ಲಂಗೋಟಿಯನ್ನು ಧರಿಸಿದ್ದನು. ಕೊರಳಲ್ಲಿ ತುಳಸೀಮಣಿಯ ಮಾಲೆಯಿತ್ತು. ದೇಹವು ಸೊರಗಿ ಹೋಗಿತ್ತು. ರಾಮನು ಇವರ ಹತ್ತಿರ ಬರಲಿಲ್ಲ. ದೂರದಲ್ಲಿಯೆ ನಿಂತು ನಮಸ್ಕರಿಸಿದನು. ಸುಶೀಲೆಯು ರಾಮನನ್ನು ಹಿಡಿಯಬೇಕೆಂಬಾಶೆಯಿಂದ ಧಾವಿಸುವುದರಲ್ಲಿದ್ದಳು; ಆದರೆ ಭೀಮರಾಯನು ಬೇಡವೆಂದು ಸನ್ನೆಮಾಡಿ: "ಈ ಸಮಯದಲ್ಲಿ ಅವನನ್ನು ಮುಟ್ಟಬೇಡ. ನೀನು ಅವನನ್ನು ಮುಟ್ಟಿದರೆ ಮೈಲಿಗೆಯಾಯಿತೆಂದು ಭಾವಿಸಿ, ಅವನು ಮತ್ತೆ ಸ್ನಾನ ಮಾಡಬೇಕಾದೀತು" ಎಂದು ನುಡಿದನು.

ಭೀಮರಾಯನು ತುಸ ಹೊತ್ತು ಸುಮ್ಮನಿದ್ದು ಬಳಿಕ: "ರಾಮು, ಅಪ್ಪನೆಲ್ಲಿರುವನು?" ಎಂದು ಕೇಳಿದನು.

"ಪೂಜ್ಯಪಾದ ಗುರುಗಳ ಸನ್ನಿಧಿಯಲ್ಲಿ ಕುಳಿತು ಭಾಗವತವನ್ನು ಶ್ರವಣ ಮಾಡುತ್ತಿರುವನು."

"ನಾವು ಇಲ್ಲಿಯೆ ನಿಂತಿರುವೆವು. ಅಪ್ಪನನ್ನು ಕಳುಹಿಕೊಡು." ಭೀಮರಾಯನು ಹೇಳಿದನು.

"ನೀವು ಬಂದ ಸುದ್ದಿಯು ಅಪ್ಪನಿಗೆ ಗೊತ್ತಾಗಿದೆ. ಇನ್ನು ಮೇಲೆ ಬರುವನು."

ಕೆಲಕಾಲದ ಮೇಲೆ ಆವುಗೆಗಳನ್ನು ಧರಿಸಿದ್ದ ರಂಗರಾಯನು ಬಂದನು. ಮೈಮೇಲೆ ಉಡುವ-ಹೊರುವ ದೋತರಗಳ ಹೊರತು ಬೇರೆ ಬಟ್ಟೆಯಿರಲಿಲ್ಲ. ಕೊರಳಲ್ಲಿ ತುಳಸೀಮಾಲೆಯಿತ್ತು. ಮುಖಲಕ್ಷದಲ್ಲಿ ಪರಿವರ್ತನೆಯಿರಲಿಲ್ಲ. ಶರೀರವು ನೊರಗಿರಲಿಲ್ಲ; ಆದರೆ ಆಚರಣೆಯಲ್ಲಿ ವಿಶೇಷ ಸ್ಥಿತ್ಯಂತರವಾಗಿತ್ತು. ವಿನೀತ ಭಾವಪ್ರದರ್ಶನ, ಮೆಲ್ಲನೆ ಮಾತಾಡುವಿಕೆ ಮೊದಲಾದವುಗಳು ರಂಗರಾಯನ ಸ್ವಭಾವಪರಿವರ್ತನೆಯನ್ನು ಸೂಚಿಸುತ್ತಿದ್ದವು. ಸುಭದ್ರೆಯೂ ಸುಶೀಲೆಯೂ ನಮಸ್ಕಾರ ಮಾಡುತ್ತಲೆ ರಂಗರಾಯನು ದೂರ ನಿಂತೇ ಆಶೀರ್ವಾದಮಾಡಿದನು.

"ಈ ಮನೆಯಲ್ಲಿ ನಮಗೆ ಕುಳ್ಳಿರಲಿಕ್ಕೆ ಸ್ಥಳವಿಲ್ಲದಾಯಿತೆ?" ಭೀಮರಾಯನು ಕೇಳಿದನು. ರಂಗರಾಯನು ಲಜ್ಜಿತನಾಗಿ: "ನಿನ್ನೆ ಬಂದಿರುವೆನು. ಒಂದೆರಡು ದಿನಗಳಲ್ಲಿ ತಕ್ಕ ವ್ಯವಸ್ಥೆ ಮಾಡಿರುವೆನು" ಎಂದು ಹೇಳಿದನು.

"ಹೀಗಿದ್ದರೆ, ಈಗ ನಾವು ತಿರುಗಿ ಮನೆಗೆ ಹೋಗುವೆವು. ಇನ್ನು ನಿನಗೆ ನಮ್ಮ ಪ್ರಯೋಜನವಿರದು. ಆದರೂ ತಕ್ಕ ವ್ಯವಸ್ಥೆಯಾಗುತ್ತಲೆ ತಿಳುಹು. ಒಮ್ಮೆ ಒಂದು ನಾಲ್ಕು ಮಾತುಗಳಾಡಿ ಹೋಗಬೇಕೆಂದಿರುವೆವು."

ರಂಗರಾಯನು ಮಾತಾಡದೆ ಸುಮ್ಮನಿದ್ದನು. ಭೀಮರಾಯನು ಸುಭದ್ರೆ-ಸುಶೀಲೆಯರೊಡನೆ ಮನೆಗೆ ಹೊರಟನು. ಮೋಟರ ಬಂಡಿಯಲ್ಲಿ ಸುಭದ್ರೆಯು ಪಿಟ್ಟೆಂದು ಮಾತಾಡಲಿಲ್ಲ. ಇವಳ ಕಣ್ಣುಗಳಿಂದ ಅಶ್ರುಗಳು ತಾವೇ ತಾವಾಗಿ ಹೊರಬೀಳುತಲಿದ್ದುವು ಇನ್ನು ತೌರುಮನೆಯಲ್ಲಿ ತನಗೆ ಸ್ಥಳವಿಲ್ಲವೆಂಬುದನ್ನು ಸುಭದ್ರೆಯು ಗೊತ್ತುಮಾಡಿಕೊಂಡಿದ್ದಳು. ಇವಳು ಅಣ್ಣನು ಏನೇ ಅನ್ನಲಿ, ಒತ್ತಾಯದಿಂದಾದರೂ ರಾಮುನನ್ನು ಮನೆಗೆ ಕರಕೊಂಡು ಹೋಗಬೇಕೆಂದು

ಮಾಡಿದ್ದಳು; ಆದರೆ ತೌರುಮನೆಯಲ್ಲಿ ನಡೆದಿದ್ದ ಆ ಅನಾಹುತವನ್ನು ನೋಡಿದ ಒಳಿಕ ಈ ಕೆಲಸವೂ ತನ್ನಿಂದಾಗದೆಂದು ಗೊತ್ತುಮಾಡಿಕೊಳ್ಳಲಿಕ್ಕೆ ತಡವಾಗಲಿಲ್ಲ.

ಮುಂದೆ ಒಂದು ತಿಂಗಳು ಕ್ರಮಿಸಿತು. ಬಂಧು-ಬಾಂಧವರೂ ಸ್ನೇಹಿತರೂ ರಂಗರಾಯನ ವಿಷಯವನ್ನೆತ್ತಿ ಮನಬಂದಂತೆ ಮಾತಾಡಿಕೊಳ್ಳುತ್ತಿದ್ದರು. ಸುಭದ್ರೆಯು ಈ ಜನರಿಗೆ ಮೋರೆ ತೋರಿಸದವಳಾದಳು ಎಲ್ಲಿಯೂ ಹೋಗಲಾರದವಳಾದಳು. ಭೀಮರಾಯನೂ ಖಿನ್ನನಾಗಿ ಬಗೆ ಬಗೆಯ ಯೋಚನೆಗೊಳಗಾದನು: "ರಂಗರಾಯನು ಪರಲೋಕದ ಸೌಖ್ಯದ ಬೆನ್ನು ಹತ್ತಿದ್ದಾನೆ. ಅವನನ್ನು ಈ ಕೃತಿಯಿಂದ ತಡೆಯುವುದು ಹೇಗೆ? ಮೇಲಾಗಿ ಭಾಮಿನಿಯ ಭಯವಂತು ಇದ್ದೇ ಇದೆ ಆತ್ಮೀಯಳಾಗಿ ಬಂದ ಆ ಕುಹಕಿನಿಯು ಅಲ್ಪಾವಧಿಯಲ್ಲಿಯೆ ಈ ಬೇಗೆಯನ್ನು ಹರಡಿ ಮಾಯವಾಗಿ ಹೋಗಿಬಿಟ್ಟಳು. ಈಗಳಿನ ರಂಗರಾಯನ ಸ್ಥಿತಿಯ ಸುದ್ದಿಯನ್ನು ಕೇಳಿ ಮತ್ತೆ ಬಂದು ಬಿಟ್ಟರೆ ಅನರ್ಥ ಪರಂಪರೆಗೆ ಆಳತೆಯಿಲ್ಲದಾಗಿ ಹೋಗುವುದು!"

ಈ ಸಮಯದಲ್ಲಿ ಸುಭದ್ರೆಯೊಬ್ಬಳೇ ಅಲ್ಲ, ಸುಶೀಲೆಯೂ ಭೀಮರಾಯನೂ ಭಾಮಿನಿಯ ಮೇಲೆ ಕೋಪಗೊಂಡಿದ್ದರು. ಇವರೆಲ್ಲರು ಇಷ್ಟೆಲ್ಲ ಅನರ್ಥಕ್ಕೆ ಭಾಮಿನಿಯೇ ಮೂಲ ಕಾರಣಳೆಂದೂ, ಅವಳು ಇಲ್ಲಿಗೆ ಬರದಿದ್ದರೆ ಈ ಉತ್ಪಾತವೇಳುತ್ತಿರಲಿಲ್ಲವೆಂದೂ ಭಾವಿಸಿದವರಾಗಿದ್ದರು.

ಇಂದು ರವಿವಾರ. ಭೀಮರಾಯನೂ, ಸುಭದ್ರೆಯೂ ಮುಂಜಾವಿನ ಚಹಾಪಾನದ ವೇಳೆಯಲ್ಲಿ ರಂಗರಾಯನ ವಿಷಯದಲ್ಲಿ ಮಾತಾಡುತ್ತಿದ್ದರು. ಇವರು ಅಂದು ರಂಗರಾಯನ ಮನೆಗೆ ಹೋಗಿ, ಕುಳ್ಳಿರಲಿಕ್ಕೆ ಸ್ಥಳವನ್ನು ಕೂಡ ಕಾಣದೆ ತಿರುಗಿ ಬಂದಾಗಿನಿಂದ ಈ ವರೆಗೆ ಅಲ್ಲಿಗೆ ಹೋಗಿರಲಿಲ್ಲ; ಆದರೂ ರಂಗರಾಯನ ಮನೆಯಲ್ಲಿ ನಡೆಯುತ್ತಿರುವ ಎಲ್ಲ ವ್ಯವಹಾರಗಳನ್ನು ಕೇಳಿ ತಿಳಿದವರಾಗಿದ್ದರು. ರಂಗರಾಯನು ಗುರು-ಶಿಷ್ಯಮಂಡಳಿಯೊಡನೆ ವಾಸವಾಗಿದ್ದಾನೆ ಇವನು ಬೇಗನೆ ಹೊರಡುವ ಆಲೋಚನೆಯಲ್ಲಿಲ್ಲ. ಮನೆಯಲ್ಲಿ ದೇವಪೂಜೆಯೂ, ಭಜನೆಯೂ ಒಳ್ಳೆ ವಿಜೃಂಭಣೆಯಿಂದ ಸಾಗುತ್ತಲಿದೆ. ಪ್ರಸಾದದ ವ್ಯವಸ್ಥೆಯೂ ಚನ್ನಾಗಿ ನಡೆದದೆ ಈ ಮೊದಲಾದ ಸುದ್ದಿಗಳನ್ನು ಸುಭದ್ರೆಯು ಮೊದಲೆ ತಿಳಿದಿದ್ದಳು. ಈಗ ಮತ್ತೊಂದು ಹೊಸ ಸುದ್ದಿಯನ್ನು ಕೇಳಿದ್ದಳು. ಇದಾವುದೆಂದರೆ, ರಂಗರಾಯನು ತನ್ನ ಗುರುವಿಗೆ ಮಂಚಾಲೆಯಲ್ಲಿ ಮನೆಕಟ್ಟಿಸಿಕೊಡುವುದಕ್ಕಾಗಿ ಸಾಲಮಾಡುವುದರಲ್ಲಿದ್ದಾನೆ. ಸುಭದ್ರೆಯ ವಿವಾ

ಕ್ಕೆ ಪಾರಾವಾರವಿಲ್ಲದಾಯಿತು. ಇವಳು ಪತಿಯನ್ನುದ್ದೇಶಿಸಿ, "ಅಣ್ಣನು ಸಾಲಮಾಡುವುದರಲ್ಲಿದ್ದರೆ, ನೀವು ಅವನನ್ನು ತಡೆಯಲಿಕ್ಕೆ ಬೇಕು. ನಾವು ಈ ವೇಳೆಯಲ್ಲಿ ಸುಮ್ಮನೆ ಕುಳಿತರೆ ಮುಂದೆ ರಾಮನ ಗತಿಯೇನು?" ಎಂದು ನುಡಿದಳು.

ಭೀಮರಾಯನು ನಿಟ್ಟುಸಿರುಬಿಟ್ಟು ಇಂತು ಹೇಳಿದನು: "ಇದರಲ್ಲಿ ನಾನೇನು ಮಾಡಲಿಕ್ಕೆ ಬರುವಂತಿದೆ? ಈ ಪ್ರಸಂಗದಲ್ಲಿ ರಂಗನು ನನ್ನ ಮಾತನ್ನು ಕೇಳುವ ಸಂಭವವಿಲ್ಲ. ಮನೆಗೆ ಹೋದರೆ ಮಾತಾಡಿಸದಿದ್ದ ಅವನು, ನಾನು ಸಾಲಮಾಡಬೇಡವೆಂದು ಹೇಳಿದರೆ ಬಿಡುವನೆ?"

ಸುಭದ್ರೆಯು ಯೋಚನೆಗೊಳಗಾದಳು. ಏನು ಮಾಡಬೇಕೆಂಬದು ಅವಳಿಗೆ ಹೊಳೆಯಲಿಲ್ಲ. ಭೀಮರಾಯನು: "ಏನೇ ಆಗಲಿ, ರಂಗನ ಮನೆಗೆ ಹೋಗದೆ ಬಹು ದಿನಗಳಾದವು. ಇಂದು ಒಮ್ಮೆ ಹೋಗಿ ಬರೋಣ, ನಡೆ" ಎಂದು ನುಡಿದನು.

ಸುಭದ್ರೆಗೆ ಇಂದು ಅತ್ಯಂತ ದುಃಖವಾಗಿತ್ತು. ಕಾರಣ ಇವಳು ಮಾನಾಪಮಾನಗಳ ಪ್ರಶ್ನೆಯನ್ನು ಮರೆದು ಅಣ್ಣನ ಮನೆಗೆ ಹೊರಡಲಿಕ್ಕೆ ಸಿದ್ಧಳಾದಳು.

ಭೀಮರಾಯನು ಇಂದು ಸುಶೀಲೆಯನ್ನು ಸಂಗಡ ಕರೆದುಕೊಳ್ಳಲಿಲ್ಲ. ದಂಪತಿಗಳು ಮೋಟಾರ ಬಂಡಿಯನ್ನೇರಿ ರಂಗರಾಯನ ಮನೆಗೆ ಹೋದರು. ಮುಂಜಾವಿನ ಹತ್ತುಗಂಟೆಯಾಗಿತ್ತು. ಹೊರಮನೆಯಲ್ಲಿ ಆ ಅಗಡಬಂಬ ಬ್ರಾಹ್ಮಣರಿದ್ದು, ಗಂಟುಕಟ್ಟಿಕೊಳ್ಳುವುದರಲ್ಲಿದ್ದರು. ಭೀಮರಾಯನು: "ರಂಗರಾಯನು ಮನೆಯಲ್ಲಿದ್ದಾನೆಯೆ?" ಎಂದು ಬ್ರಾಹ್ಮಣೋತ್ತಮರನ್ನು ವಿಚಾರಿಸಿದನು.

ಬ್ರಾಹ್ಮಣರು ಮೋರೆಯೆತ್ತಿ ನೋಡಿದರು. ಕ್ಷಣಕಾಲ ಸುಮ್ಮನಿದ್ದರು. ಬಳಿಕ "ರಾಯರು ಮುಂಚಾಲೆಗೆ ಹೋಗಿದ್ದಾರೆ," ಎಂದು ಉತ್ತರ ಕೊಟ್ಟರು.

"ಯಾವಾಗ್ಗೆ ತಿರುಗಿ ಬರುವನು?"

"ನಾಳೆ ಸಾಯಂಕಾಲಕ್ಕೆ"

"ರಂಗರಾಯನ ಮಗನು ಮನೆಯಲ್ಲಿರುವನೆ?"

"ಇರುವನು" ಬ್ರಾಹ್ಮಣರು ಮತ್ತೆ ತಮ್ಮ ಕೆಲಸದಲ್ಲಿ ತೊಡಗಿದರು.

ದಂಪತಿಗಳು ರಂಗರಾಯನ ಆಫೀಸಿನ ಕೋಣೆಗೆ ಹೋಗಿ ನೋಡಿದರು. ಅದು ಮತ್ತೆ ಮೊದಲಿನ ಸಾಮಾನುಗಳಿಂದ ಮಂಡಿತವಾಗಿತ್ತು. ಸುಭದ್ರೆಯು

ಸಂತೋಷದಿಂದ: ‹‹ಅಣ್ಣನಿಗೆ ಮತ್ತೆ ಸುಬುದ್ಧಿಯುಂಟಾಗಿರುವಂತೆ ತೋರು ತ್ತಿದೆ,'' ಎಂದು ನುಡಿದಳು ಹಿಂದೆ ಸಪ್ಪಳವಾಗುತ್ತಿರುವುದನ್ನು ಕೇಳಿ ದಂಪ ತಿಗಳು ಹಿಂದಿರುಗಿ ನೋಡಿದರು ವಿಸ್ಮಯದಿಂದ ವಾಕ್ಶಕ್ತಿಯಿಲ್ಲದವರಾಗಿ ಹೋದರು. ಹೊರಗೆ ಹೋಗಿದ್ದ ರಾಮುನು ರಬ್ಬರಿನ ಚಂಡನ್ನು ಪುಟಿಸುತ್ತ ಪುಟಿಸುತ್ತ ಒಳಗೆ ಬರುತ್ತಿದ್ದನು. ಇಂದು ಆ ಲಂಗೋಟಿಯಿರಲಿಲ್ಲ. ತುಳಸೀ ಮಾಲೆಯಿರಲಿಲ್ಲ ಮೈಯಲ್ಲಿ ಶರ್ಟ ತೊಟ್ಟಿದ್ದನು. ಅಂಚಿನ ದೋತರವನ್ನು ಟ್ಟಿದ್ದನು. ತಲೆಯ ಮೇಲೆ ಜರದ ಟೊಪ್ಪಿಗೆಯಿತ್ತು. ರಾಮನು ಧಾವಿಸಿ ಹೋಗಿ ಸುಭದ್ರೆಗೆ ತೆಕ್ಕೆಬಿದ್ದು:‹‹ಅತ್ತಿ, ಅವ್ವನು ಬಂದಿದ್ದಾಳೆ. ಅಡುಗೆ ಮಾಡು ತ್ತಿದ್ದಾಳೆ; ನಡೆ, ಹೋಗೋಣ'' ಎಂದು ನುಡಿದನು.

ಸುಭದ್ರೆಯ ವಿಸ್ಮಯಕ್ಕೆ ಪಾರಾವಾರವಿಲ್ಲದಾಯಿತು. ಭೀಮರಾಯನು ಇಂತು ಮಾತಾಡಿದನು: ‹‹ರಾಮೂ, ನಿನ್ನ ಅವ್ವನು ಬಂದಿರುವಳೆ? ಅಂತೆಯೆ ಈ............''

‹‹ನಿನ್ನೆ ಮಧ್ಯಾಹ್ನದಲ್ಲಿ ಬಂದಳು. ಮಾವಾ, ಅಡುಗೆಯ ಮನೆಗೆ ಹೋಗೋಣ, ನಡೆ''

‹‹ನಡೆ.''

ಮೂವರೂ ಅಡುಗೆಯ ಮನೆಯ ಹತ್ತರ ಬರುತ್ತಲೆ, ಭಾಮಿನಿಯು ಕೈ ತೊಳೆದುಕೊಂಡು ಎದ್ದು ಬಂದಳು. ಸುಭದ್ರೆಯು ಕಾಲೊಳಗಿನ ಬೂಟುಗ ಳನ್ನು ತೆಗೆದಿರಿಸಿ ಹೋಗಿ ನಮಸ್ಕಾರ ಮಾಡಿದಳು: ‹‹ಅತ್ತಿಗೆ, ನಡೆದಿದ್ದ ಅನಾ ಹುತವನ್ನು ನೋಡಿದೆಯಷ್ಟೆ?'' ಎಂದು ಕೇಳಿದಳು.

ಭಾಮಿನಿಯು ಸುಭದ್ರೆಯ ಕೂದಲುಗಳನ್ನು ಸರಿಪಡಿಸಿ ಆಲಿಂಗಿಸಿದಳು. ನಕ್ಕು ಮಾತಾಡಹತ್ತಿದಳು: "ತಂಗಿ, ನೋಡದೇನು ಮಾಡಲಿ? ಎಲ್ಲವನ್ನೂ ನೋಡಿದೆನು. ಈ ಬಾಲಕನ ಸ್ಥಿತಿಯನ್ನು ನೋಡಿ ನನಗೆ ಅತ್ಯಂತ ದುಃಖವಾ ಯಿತು. ಕೂಡಲೆ ತಕ್ಕ ಏರ್ಪಾಟು ಮಾಡಿಸಿದೆನು. ನೀವು ಇಲ್ಲಿಯೆ ಇರಲಿ ಲ್ಲವೆ? ನೋಡಿ ಹೇಗೆ ಸುಮ್ಮನಿದ್ದಿರಿ?'' ಭಾಮಿನಿಯು ಭೀಮರಾಯನ ಕಡೆಗೆ ನೋಡಿದಳು

‹‹ತಂಗಿ, ಇಷ್ಟು ಅವಸರದಿಂದ ಮಾತಾಡುವ ಕಾರಣವಿಲ್ಲ. ಸ್ವಸ್ಥಚಿತ್ತ ರಾಗಿ ಕುಳಿತು ಸಾವಕಾಶವಾಗಿ ಮಾತಾಡೋಣವಂತೆ. ಈಗ ನನಗೆ ಹೊಟ್ಟೆ ಹಸಿದಿದೆ. ಮೊದಲು ನನಗೆ ಏನಾದರೂ ತಿನ್ನಲಿಕ್ಕೆ ಕೊಡು,'' ಭೀಮರಾ

ನು ಅತ್ತಿತ್ತ ನೋಡಿ: “ಶಿಷ್ಯದ್ವಯರು ಹೋಗಿರುವುದನ್ನು ಕಂಡೆನು. ಗುರು ರ್ಯರೆಲ್ಲಿಯೂ ಕಾಣಲೊಲ್ಲರು. ಎಲ್ಲಿಗೆ ಹೋಗಿದ್ದಾರೆ?” ಎಂದು ಕೇಳಿದನು.

“ನೀವು ಭಯಗೊಳ್ಳುವ ಕಾರಣವಿಲ್ಲ. ಅವರು ಪಂಚಾಲೆಗೆ ಹೋಗಿ ರೆ.” ಭಾಮಿನಿಯು ನಗುತ್ತ ನುಡಿದಳು.

“ತಿರುಗಿ ಯಾವಾಗ್ಗೆ ಬರುವರು?” ಭೀಮರಾಯನು ಕೇಳಿದನು

“ತಿರುಗಿ ಬರುವದೇ ಇಲ್ಲ.” ಭಾಮಿನಿಯು ಮುಗುಳು ನಗೆಯಿಂದ ಳಿದಳು.

“ತಂಗಿ, ನಿನಗೆ ಇಂತಹ ಸುಬುದ್ಧಿಯುಂಟಾದೀತೆಂಬುದನ್ನು ನಾವು ಕನಸಿ ಕೂಡಾ ಭಾವಿಸಿದವರಲ್ಲ. ಪುರಾಣಮತಾಭಿಮಾನಿಯಾದ ನೀನು ಬ್ರಹ್ಮ ರಿಯಾಗಿದ್ದ ರಾಮನ ಕೊರಳೊಳಗಿನ ತುಳಸೀಮಣಿಯ ಮಾಲೆಯನ್ನು ತೆಗೆ ಸಿದೆಯಲ್ಲವೆ? ಇದರ ಇಂಗಿತವೇನು?” ಭೀಮರಾಯನು ಕೇಳಿದನು.

ಭಾಮಿನಿಯು ನಗೆಮೊಗದಿಂದ ಭೀಮರಾಯನ ಮಾತನ್ನನುಕರಿಸಿ ತು ನುಡಿದಳು: “ಅಣ್ಣಾ, ಅವಸರದಿಂದ ಮಾತಾಡುವ ಕಾರಣವಿಲ್ಲ. ಸ್ವಸ್ಥ ರಾಗಿ ಕುಳಿತು ಸಾವಕಾಶವಾಗಿ ಮಾತಾಡೋಣ. ಈಗ ನೀವು ಮೇಲೆ ಯಿರಿ. ಮೊದಲು ನಿಮಗೆ ತಿನ್ನಲಿಕ್ಕೆ ಕೊಡುವೆನು.

* * * * * * * * * * * * * * *

## ೧೯

....

ವಾಚಕಮಹಾಶಯ, ನಾವು ಬರೆಯಲಾರಂಭಿಸಿದ ಕತೆಯು ಇಲ್ಲಿಗೆ ಕೊನೆಗಂಡಿತು. ಭಾಮಿನಿಯ ಮುಂದಿನ ಪರಿಣಾಮವನ್ನು ಊಹಿಸುವದು ಜಡವಲ್ಲ. ಹೀಗೆ ಊಹಿಸುವ ಶ್ರಮವನ್ನು ವಹಿಸದ ವಾಚಕರ ಸಲುವಾಗಿ ನಾವು ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ: ಭಾಮಿನಿಯು ಮುಂದೆ ತನ್ನ ಪ್ರಾಪ್ಯ ಅಧಿಕಾರದಿಂದ ಎಂದೂ ವಂಚಿತಳಾಗಲಿಲ್ಲ— ಪತಿಸನ್ನಿಧಿಯನ್ನು ತ್ಯಜಿಸಲಿಲ್ಲ. ಇವಳನ್ನು ಈ ಸ್ಥಳದಿಂದ ಹೊರದೂಡುವದಕ್ಕೆ ಯಾರೂ ಇಚ್ಛಿಸ ಲಿಲ್ಲವಿಷ್ಟೆ ಅಲ್ಲ, ಎಲ್ಲರೂ ಮಿಗಿಲಾದ ಪ್ರೀತಿಯಿಂದ ವರ್ತಿಸಹತ್ತಿದರು. ಹೀಗೆ ಭಾಮಿನಿಯು ಎಲ್ಲರಿಗೂ ಬೇಕಾಗಿ ಸಂಸಾರವನ್ನು ಸಾಗಿಸಿದಳು. ಗಂಡು-ಮಕ್ಕಳನ್ನು ಹೆತ್ತಳು. ಸೌಭಾಗ್ಯವತಿಯಾಗಿ ಬಹು ಕಾಲ ಬಾಳಿದಳು.




ಇದು ಆನಂದವನ-ಅಗಡಿ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಭಿ. ಪ. ಕಾಳೆ, ಇವರಿಂದ ಮುದ್ರಿಸಲ್ಪಟ್ಟಿತು.